ಸಂಪುಟ ೧೪ ಸಂಚಿಕೆ ೩ ಸೆಪ್ಟಂಬರ್ 1993

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ. ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಬ್ಯಾಂಕುಗಳ ಬಂಡವಾಳ ಎಷ್ಟಿರಬೇಕು?

**ಸಿ. ಎನ್. ಶಂಕರ್**

ಮೈಸೂರು ಬ್ಯಾಂಕ್, ನಾಗಮಂಗಲ

ಅನ್ಯರ ಹಣದಲ್ಲಿ ವಹಿವಾಟು ನಡಸುವ ಬ್ಯಾಂಕುಗಳು ಸಾಕಷ್ಟು ಸ್ವಂತ ಬಂಡವಾಳವನ್ನು ಹೊಂದಿರುವುದು ಅವುಗಳ ಗ್ರಾಹಕರ ಹಾಗೂ ಇಡೀ ಅರ್ಥವ್ಯವಸ್ಥೆಯ ಆರೋಗ್ಯ ಹಾಗೂ ಭದ್ರತೆಯ ದೃಷ್ಟಿಯಿಂದ ಅತ್ಯಗತ್ಯ. ಪ್ರಮುಖ ಬ್ಯಾಂಕುಗಳ ರಾಷ್ಟ್ರೀಕರಣವಾದ ಅನಂತರ ಈ ಅಂಶಕ್ಕೆ ಹೆಚ್ಚು ಗಮನ ಹರಿಸದೆ ಅವುಗಳ ವಿಸ್ತರಣ ನಡೆದಿದ್ದರಿಂದ ಇಡೀ ಬ್ಯಾಂಕಿಂಗ್ ವ್ಯವಸ್ಥೆಯೇ ಅಪಾಯದ ಅಂಚಿನಲ್ಲಿದೆ. ಬ್ಯಾಂಕುಗಳು ತಮ್ಮ ಬಂಡವಾಳದ ಬಗ್ಗೆ ಅಂತರ ರಾಷ್ಟ್ರೀಯ ಸೂತ್ರಗಳನ್ನು ಅನುಸರಿಸುವುದು ಅನಿವಾರ್ಯ.

**ಯಾವುದೇ** ವಾಣಿಜ್ಯ ಸಂಸ್ಥೆಯ ಜೀವಧಾತು ಅದರ ಬಂಡವಾಳ. ಸಂಸ್ಥೆಯ ಯಶಸ್ಸಿಗೆ ಅದರ ಬಂಡವಾಳದ ಸ್ವರೂಪ ಮತ್ತು ಗಾತ್ರ ವಿಶೇಷ ರೀತಿಯಲ್ಲಿ ಕಾರಣವಾಗುತ್ತವೆ. ನಮ್ಮ ಬ್ಯಾಂಕು ಗಳಲ್ಲಿ ಈ ಬಂಡವಾಳದ ಪಾತ್ರವನ್ನು ಸ್ವಲ್ಪ ಗಮನಿಸೋಣ.

1969ನೆಯ ಇಸವಿಯಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣವಾಗು ವುದಕ್ಕೆ ಮುನ್ನ ಬ್ಯಾಂಕುಗಳ ಗಾತ್ರ, ಕಾರ್ಯವ್ಯಾಪ್ತಿ ಅಷ್ಟೊಂದು ವಿಸ್ತಾರವಾಗಿರಲಿಲ್ಲ. ಅದರಂತೆಯೇ ಆಗಿನ ಬ್ಯಾಂಕುಗಳ ಬಂಡ ವಾಳ ಸಹ ಗಾತ್ರದಲ್ಲಿ ಚಿಕ್ಕದಾಗಿಯೇ ಇತ್ತು.

ಆದರೆ, 1969ರಲ್ಲಿ ರಾಷ್ಟ್ರೀಕರಣವಾದ ನಂತರ ಬ್ಯಾಂಕುಗಳ ಗಾತ್ರ, ಕಾರ್ಯವ್ಯಾಪ್ತಿ ಗಮನೀಯವಾಗಿ ಬೆಳೆಯತೊಡಗಿತು. ಠೇವಣಿ ಹಾಗೂ ಉದರಿಗಳೂ ವಿಪರೀತವಾಗಿ ಬೆಳೆಯತೊಡಗಿ ದುವು. ದೇಶದ ಉದ್ದಗಲಕ್ಕೂ, ಪಟ್ಟಣ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲೂ ಶಾಖೆಗಳ ಬೃಹತ್ ಜಾಲ ನಿರ್ಮಾಣಗೊಂಡಿತು.

ಭಾರತ ಸರ್ಕಾರವೇ ರಾಷ್ಟ್ರೀಕೃತ ಬ್ಯಾಂಕುಗಳ ಮಾಲೀಕತೆ ಪಡೆದುದರಿಂದ ಸಾಮಾನ್ಯ ಜನರು ಬ್ಯಾಂಕುಗಳಲ್ಲಿ ಹೆಚ್ಚಿನ ನಂಬಿಕೆ ಇಡುವಂಥ ವಾತಾವರಣ ಏರ್ಪಟ್ಟಿತು. ಆದರಿಂದಾಗಿ ಬ್ಯಾಂಕು ಗಳ ಬಂಡವಾಳದ ಯುಕ್ತ ಪ್ರಮಾಣದ ಬಗ್ಗೆ ವಿಶೇಷ ಗಮನ ಹರಿಯಲಿಲ್ಲ. ಠೇವಣಿ, ಉದರಿ, ಸಿಬ್ಬಂದಿ, ಶಾಖೆ ಮುಂತಾದ ಕ್ಷೇತ್ರಗಳಲ್ಲಿ ಬ್ಯಾಂಕುಗಳು ಬೃಹತ್ತಾಗಿ ಬೆಳೆಯತೊಡಗಿದಾಗ, ಅದೇ ಪ್ರಮಾಣದಲ್ಲಿ ಬ್ಯಾಂಕುಗಳ ಬಂಡವಾಳ ವೃದ್ಧಿಗಾಗಿ ಪ್ರಯತ್ನ ನಡೆಯಲಿಲ್ಲ.

ಇದೇ ಸಂದರ್ಭದಲ್ಲಿ, ಬ್ಯಾಂಕುಗಳ ಬೆಳವಣಿಗೆಗೆ ಅನುಗುಣ ವಾಗಿ ಬ್ಯಾಂಕುಗಳ ಲಾಭದಲ್ಲಿ ಹೆಚ್ಚಳ ಉಂಟಾಗಲಿಲ್ಲ. ಅದರ ಬದಲಾಗಿ, ನಿರ್ವಹಣೆಯ ವೆಚ್ಚದ ಹೆಚ್ಚಳ, ಆದಾಯದಾಯಕ ವಲ್ಲದ ಆದ್ಯತಾವಲಯದ ಉದರಿ, ನಿರ್ದೇಶಿತ ಬಡ್ಡಿದರಗಳು, ಹೆಚ್ಚಿನ ನಗದು ಮೀಸಲು ಅನುಪಾತ ಮತ್ತು ಪರಿನಿಯತ ದ್ರವತ್ವ ಅನುಪಾತಗಳ ಅಗತ್ಯ, ಸಿಬ್ಬಂದಿ ವೇತನದಲ್ಲಿ ಹೆಚ್ಚಳ, ಹೀಗೆ ಹಲವಾರು ಕಾರಣಗಳಿಂದಾಗಿ ಬ್ಯಾಂಕುಗಳ ಲಾಭಗಳಿಕೆ ಕ್ರಮೇಣ ಕುಂಠಿತವಾಗುತ್ತಾ ಬಂದಿತು. ಲಾಭ ಕಡಿಮೆಯಾದಂತೆ, ಮೀಸಲು ನಿಧಿಯ ಹೆಚ್ಚಳ ವಿಪರೀತ ಕಡಿಮೆಯಾಗತೊಡಗಿತು. ಅಲ್ಲದೆ ಹೋಕು ಬಾಕಿಗಳನ್ನು ತೊಡೆದುಹಾಕುವುದರಿಂದಾಗಿ ಮೀಸಲು ನಿಧಿಯ ಗಾತ್ರ ಸಹ ಕುಗ್ಗುತ್ತಾ ಬಂದಿತು. ಹೀಗಾಗಿ ಬಂಡವಾಳದ ಪ್ರಮುಖವಾದ ಒಂದಂಶ ಕ್ರಮೇಣ ಕರಗುತ್ತಾ ಬರತೊಡಗಿತು.

ಈ ಎಲ್ಲದರ ಪರಿಣಾಮವಾಗಿ ಒಂದು ರೀತಿಯ ಉಸಿರು ಕಟ್ಟು ವಂತಹ ಪರಿಸ್ಥಿತಿ ಉಂಟಾಯಿತು.

**ಪರಿಸ್ಥಿತಿಯ ಅರಿವು**

ದೇಶದ ಹಣಕಾಸು ಸಂಸ್ಥೆಗಳ ಪುನರ್ರಚನೆಯನ್ನು ಕುರಿತ ಪ್ರಶ್ನೆ ಯನ್ನು ಪರಿಶೀಲಿಸಿ ಸಲಹೆ ನೀಡಲು ನಿಯುಕ್ತವಾದ ನರಸಿಂಹಮ್ ಸಮಿತಿ ಈ ಅಪಾಯಕಾರಿ ಪರಿಸ್ಥಿತಿಯ ತೀವ್ರತೆಯನ್ನು ಮನ ಗಂಡು ಈ ದಿಸೆಯಲ್ಲಿ ಹಲವಾರು ಸಲಹೆಗಳನ್ನು ನೀಡಿದೆ. ಅವು ಗಳಲ್ಲಿ :

1 ನಿರ್ದೇಶಿತ ಉದರಿಯನ್ನೂ, ಸಾಮಾಜಿಕ ಸಾಲ ನೀಡಿಕೆಯನ್ನೂ ನಿರ್ದೇಶಿತ ಬಡ್ಡಿದರಗಳನ್ನೂ ಕ್ರಮೇಣ ಕಡಿಮೆಗೊಳಿಸುವುದು,
2 ವ್ಯವಸ್ಥೆಯ ಗಡುಸುತನವನ್ನು ತೊಡೆದುಹಾಕಿ ಮಾರುಕಟ್ಟೆಗೆ ತಕ್ಕಂತೆ ಅದು ಸ್ಪಂದಿಸುವಂತೆ ಮಾಡುವುದು,
3 ಬ್ಯಾಂಕುಗಳ ಸ್ಥಿತಿ ವಿವರಣ ಪಟ್ಟಿಯ ಪಾರದರ್ಶಕತೆ.
4 ಬ್ಯಾಂಕುಗಳ ಕರಡು ಋಣವನ್ನು ತೊಡೆದು ಹಾಕಲು ಆಸ್ತಿ ಪುನರ್‌ನಿರ್ಮಾಣ ನಿಧಿಯ ಸ್ಥಾಪನೆ (ಎ. ಆರ್. ಎಫ್),
5 ಬ್ಯಾಂಕುಗಳ ಬಂಡವಾಳ ತಳದಲ್ಲಿ ಸುಭದ್ರತೆ.

ಈ ಸಲಹೆಗಳನ್ನು ಒಪ್ಪಿಕೊಂಡ ಭಾರತೀಯ ರಿಸರ್ವ್ ಬ್ಯಾಂಕು ಬ್ಯಾಂಕುಗಳ ಬಂಡವಾಳ ತಳ ಸುಭದ್ರವಾಗಿರುವಂತೆ ನೋಡಿ

ಕೊಳ್ಳಲು ಮತ್ತು ಬಂಡವಾಳದ ಗಾತ್ರ ಅಂತರರಾಷ್ಟ್ರೀಯ ಸೂತ್ರಗಳಿಗೆ ಅನುಗುಣವಾಗಿರುವಂತೆ ಮಾಡಲು, ಬಾಸ್ಲೆ ಸಮಿತಿಯ ಸಲಹೆಗಳನ್ನು ಅನುಸರಿಸುವಂತೆ ಆದೇಶಿಸಿದೆ.

ಬಾಸ್ಲೆಯ ಅಂತರರಾಷ್ಟ್ರೀಯ ತೀರುವೆ ಬ್ಯಾಂಕಿನ ಸಮಿತಿಯ ಸೂತ್ರಗಳಂತೆ ವಿದೇಶಿ ಶಾಖೆಗಳನ್ನುಳ್ಳ ಬ್ಯಾಂಕುಗಳು 31-3-94ರ ವೇಳೆಗೆ ತಮ್ಮ ನಷ್ಟಸಂಭಾವ್ಯತೆಯ ಘನತೆಯಿಂದ ತೂಗಿದ ಆಸ್ತಿಗಳ (Risk weighted assets) ಕನಿಷ್ಠ ಶೇಕಡಾ ಎಂಟರಷ್ಟು ಬಂಡವಾಳವನ್ನು ಹೊಂದಿರತಕ್ಕದ್ದು. ಮತ್ತು ವಿದೇಶಿ ಶಾಖೆಗಳಿಲ್ಲದ ಬ್ಯಾಂಕುಗಳು 31-3-93ರ ವೇಳೆಗೆ ಕನಿಷ್ಠ ಶೇಕಡಾ 4ರಷ್ಟು ಬಂಡವಾಳವನ್ನು ಮತ್ತು 31-3-96ರ ವೇಳೆಗೆ ಶೇಕಡಾ 8ರಷ್ಟು ಬಂಡವಾಳವನ್ನು ಹೊಂದಿರಬೇಕು ಎಂದು ಭಾರತೀಯ ರಿಸರ್ವ್ ಬ್ಯಾಂಕು ಆದೇಶಿಸಿದೆ.

ಬಾಸ್ಲೆ ಸಮಿತಿಯ ಸೂಚನೆಗಳು ಮುಖ್ಯವಾಗಿ ಮೂರು ಅಂಶಗಳನ್ನು ಒಳಗೊಂಡಿವೆ. ಅವು:

1 ಬಂಡವಾಳದ ವ್ಯಾಖ್ಯೆ,
2 ನಷ್ಟಸಂಭಾವ್ಯತೆಯ ಘನತೆಯ ಮಾಪನವ್ಯವಸ್ಥೆ (Risk Weighting System),
3 ಕನಿಷ್ಠ ಬಂಡವಾಳ ಅನುಪಾತ.

## ಬಂಡವಾಳದ ವ್ಯಾಖ್ಯೆ

ಬಾಸ್ಲೆ ಸಂಸ್ಥೆ ಬಂಡವಾಳವನ್ನು ಎರಡು ವರ್ಗಗಳಾಗಿ ವಿಂಗಡಿಸಿ, ಅದರ ವ್ಯಾಖ್ಯೆಯನ್ನು ನೀಡಿದೆ.

**ಮೊದಲನೆಯ ವರ್ಗದ ಬಂಡವಾಳ:** ಊಹಿಸಿರದ ನಷ್ಟಗಳಿಗೆ ಸಿದ್ಧವಾಗಿ ಒದಗಿಬರುವ ಬಂಡವಾಳಗಳು. ಉದಾ: ಪಾವತಿಯಾದ ಬಂಡವಾಳ, ಪರಿನಿಯತ ಮೀಸಲು ನಿಧಿ, ಘೋಷಿಸಲ್ಪಟ್ಟ ಮುಕ್ತ ಮೀಸಲು ನಿಧಿ ಮುಂತಾದವುಗಳು.

**ಎರಡನೆಯ ವರ್ಗದ ಬಂಡವಾಳ:** ಹೆಚ್ಚು ಸ್ಥಿರವಲ್ಲದ್ದು, ಮುಖ್ಯ ಬಂಡವಾಳಕ್ಕೆ ಪೂರಕವಾದ್ದು. ಇದು ಅಘೋಷಿತ ಮೀಸಲು ನಿಧಿ, ಪುನರ್‌ಮೌಲ್ಯೀಕರಣ ಮೀಸಲು ನಿಧಿ, ಸಾಮಾನ್ಯ ಹಂಚಿಕೆಗಳು, ಸಂಮಿಶ್ರ ಬಂಡವಾಳ ಸಾಲೇಖಗಳು ಮುಂತಾದವುಗಳನ್ನು ಒಳಗೊಂಡಿದೆ.

ಬಾಸ್ಲೆ ಸಮಿತಿಯ ನಿಯಮದ ಪ್ರಕಾರ ಮೊದಲನೆಯ ವರ್ಗದ ಬಂಡವಾಳ ಒಟ್ಟು ಬಂಡವಾಳದ ಶೇಕಡಾ 50ಕ್ಕಿಂತ ಕಡಿಮೆ ಇರಬಾರದು.

**ನಷ್ಟಸಂಭಾವ್ಯತೆಯ ಘನತೆಯ ಮಾಪನ:** ಬಂಡವಾಳ ಎಷ್ಟಿರಬೇಕು ಎಂದು ನಿರ್ಧರಿಸಲು ಬ್ಯಾಂಕುಗಳ ಆಸ್ತಿಗಳನ್ನು ಅವುಗಳಿಗೆ ಹೊಂದಿಕೊಂಡಿರುವ ನಷ್ಟಸಂಭಾವ್ಯತೆಯ ಘನತೆಯ ದೃಷ್ಟಿಯಿಂದ ಒರೆಹಚ್ಚಿ ತುಲನ ಮಾಡುವ ವಿಧಾನವನ್ನು ಬಾಸ್ಲೆ ಸಮಿತಿಯು ರೂಪಿಸಿದೆ. ಅದಕ್ಕೆ ಅನುಗುಣವಾಗಿ, ಭಾರತೀಯ ರಿಸರ್ವ್‌ಬ್ಯಾಂಕ್ ಸಹ ಬ್ಯಾಂಕುಗಳ ಆಸ್ತಿಗಳನ್ನು ಎರಡು ಭಾಗವಾಗಿ ವಿಂಗಡಿಸಿ (ಸ್ಥಿತಿ ವಿವರಣ ಪಟ್ಟಿಯಲ್ಲಿರುವ ಆಸ್ತಿಗಳು ಮತ್ತು ಸ್ಥಿತಿ ವಿವರಣ ಪಟ್ಟಿಯಿಂದ ಹೊರಗುಳಿವ ಆಸ್ತಿಗಳು) ಪ್ರತಿಯೊಂದಕ್ಕೂ ನಷ್ಟ ಸಂಭಾವ್ಯತೆಯ ಘನತೆಯ ಮಾಪನ ಮಾಡಿ ಶೇಕಡಾವಾರು ಅಂಕಗಳನ್ನು ನಿಗದಿಪಡಿಸಿದೆ.

ಉದಾಹರಣೆಗೆ, ಬ್ಯಾಂಕುಗಳ ನಗದು ಶಿಲ್ಕು, ಬ್ಯಾಂಕ್ ಖಾತೆ ಶಿಲ್ಕು, ಸರಕಾರದ ಪತ್ರಗಳಲ್ಲಿ ಹೂಡಿಕೆ, ಠೇವಣಿ ಪ್ರಮಾಣ ಪತ್ರಗಳು (C. D.), ಸರಕಾರ ಜಾಮೀನು ನೀಡಿರುವ ಉದರಿಗಳು ಮುಂತಾದವುಗಳಿಗೆ ನಷ್ಟಸಂಭಾವ್ಯತೆಯ ಘನತೆಯ ಅಂಕ ಸೊನ್ನೆ (0). ಹಾಗೆಯೇ, ಭಾರತ ಸರ್ಕಾರದ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳಿಗೆ ನೀಡಿರುವ ಸಾಲ, ಇತರೆ ಹೂಡಿಕೆಗಳು, ಇತರೆ ಉದರಿಗಳು, ಕಟ್ಟಡ ಪೀಠೋಪಕರಣಗಳು ಮುಂತಾದವುಗಳಿಗೆ ನಷ್ಟಸಂಭಾವ್ಯತೆಯ ಘನತೆಯ ಅಂಕ 100.

ಅದರಂತೆಯೇ, ಸ್ಥಿತಿ ವಿವರಣ ಪಟ್ಟಿಯಿಂದ ಹೊರಗುಳಿವ ಆಸ್ತಿಗಳಿಗೆ ಪರಿವರ್ತನೀಯ ಅಂಕಗಳನ್ನು ನೀಡಲಾಗಿದೆ. ಈ ಆಸ್ತಿಗಳನ್ನು ನಿಗದಿಪಡಿಸಿರುವ ಪರಿವರ್ತನೀಯ ಅಂಕಗಳಿಂದ ಗುಣಿಸಿ. ಅದನ್ನು ನಿಗದಿಪಡಿಸಿರುವ ನಷ್ಟಸಂಭಾವ್ಯತೆ ಘನತೆಯ ಅಂಕದಿಂದ ಪುನಃ ಗುಣಿಸಬೇಕು. ಉದಾ:

| | (ಪರಿವರ್ತನೀಯ ಅಂಕ) |
|---|---|
| ಹಣಕಾಸಿನ ಖಾತರಿಗಳಿಗೆ | 100% |
| ಕಾರ್ಯಪಾಲನಾ ಖಾತರಿಗಳಿಗೆ | 50% |
| ಇತರ ಒಪ್ಪಿಗೆಗಳು, ಹೊಣೆಗಾರಿಕೆಗಳು | 100% |
| ದಸ್ತಾವೇಜು ಉದರಿ ಪತ್ರಗಳಿಗೆ | 20% |

ಇದೇ ರೀತಿಯಾಗಿ ವಿದೇಶಿ ಶಾಖೆಯುಳ್ಳ ಬ್ಯಾಂಕುಗಳ ಆಸ್ತಿಗಳಿಗೆ ಬೇರೆ ಬೇರೆ ಅಂಕಗಳನ್ನು ನಿಗದಿಪಡಿಸಲಾಗಿದೆ.

ಈ ವಿಧಾನದಿಂದ ಉಪಲಬ್ಧವಾದ ಒಟ್ಟು ಆಸ್ತಿಯ ಕನಿಷ್ಠ ಶೇಕಡಾ 4ರಷ್ಟು ಬಂಡವಾಳವನ್ನು ಬ್ಯಾಂಕುಗಳು 31–3–93ರ ವೇಳೆಗೆ ಹೊಂದಿರಬೇಕೆಂದು ಭಾರತೀಯ ರಿಸರ್ವ್ ಬ್ಯಾಂಕು ಆದೇಶಿಸಿದೆ.

## ಪರಿಣಾಮಗಳು

ಬಂಡವಾಳದ ಪ್ರಮಾಣವನ್ನು ನಿರ್ಧರಿಸುವ ವಿಧಾನ ತಿಳಿದ ನಂತರ, ಈ ಹೊಸ ಆದೇಶದಿಂದ ಬ್ಯಾಂಕುಗಳ ಮೇಲುಂಟಾಗುವ ಪರಿಣಾಮಗಳನ್ನು ಅವಲೋಕಿಸೋಣ. ಈ ಹೊಸ ಆದೇಶದ ಪರಿಣಾಮಗಳು ಪೂರ್ಣ ಪ್ರಮಾಣದಲ್ಲಿ ಮನವರಿಕೆಯಾಗಲು ಸ್ವಲ್ಪ ಕಾಲ ಕಾಯಬೇಕಾಗಬಹುದಾದರೂ, ಅದರ ತಕ್ಷಣದ ಪರಿಣಾಮಗಳನ್ನು ಊಹಿಸಬಹುದಾಗಿದೆ.

ಬಂಡವಾಳದ ಪ್ರಮಾಣವನ್ನು ಏಕಾಏಕಿ ಹೆಚ್ಚಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ, ಬ್ಯಾಂಕುಗಳ ಆಸ್ತಿಗಳ ಗಾತ್ರವೇ ಕಡಿಮೆಯಾಗಬೇಕಾಗಬಹುದು. ಬ್ಯಾಂಕುಗಳು ತಮ್ಮ ವ್ಯಾಪಾರವನ್ನು ವಿಸ್ತರಿಸಲು ತೊಡಕುಂಟಾಗಬಹುದು. ಅದರಿಂದಾಗಿ ಲಾಭಾಂಶವೂ ಸಹ ಕುಂಠಿತವಾಗಬಹುದು.

ಬ್ಯಾಂಕುಗಳು ತಮ್ಮ ಆಸ್ತಿಯ ಸಂಯೋಜನೆ ಮತ್ತು ಮಿಶ್ರಣದ ಬಗ್ಗೆ ತೀವ್ರ ಕಾಳಜಿ ವಹಿಸಬೇಕಾಗುತ್ತದೆ. ಹೆಚ್ಚು ಲಾಭಪ್ರದವಾದ ಹೂಡಿಕೆಗಳಲ್ಲಿ ಹಣ ತೊಡಗಿಸುವುದು, ಹೆಚ್ಚು ಲಾಭ

ದಾಯಕವಲ್ಲದ ಆಸ್ತಿಗಳನ್ನು ಕಡಿಮೆ ಮಾಡಿಕೊಳ್ಳುವುದು. ಬಡ್ಡೀತರ ಆದಾಯಗಳಿಗೆ ಹೆಚ್ಚು ಒತ್ತು ನೀಡುವುದು. ಹೀಗೆ ಹಲವು ಸಂಧಾರಣಾಕ್ರಮಗಳ ಬಗ್ಗೆ ಬ್ಯಾಂಕುಗಳು ತತ್‌ಕ್ಷಣದಲ್ಲಿ ತೀವ್ರ ಗಮನ ಹರಿಸಬೇಕಾಗುತ್ತದೆ.

**ಬಂಡವಾಳವನ್ನು ಹೆಚ್ಚಿಸುವ ಉಪಾಯಗಳು :** ಬಂಡವಾಳಕ್ಕೆ ಸಂಬಂಧಿಸಿದ ಈ ಹೊಸ ಆದೇಶಗಳನ್ನು ಪಾಲಿಸಲೋಸುಗ ಬ್ಯಾಂಕುಗಳು ತಮ್ಮ ಬಂಡವಾಳವನ್ನು ಹೆಚ್ಚಿಸಿಕೊಳ್ಳಬೇಕಾಗುವುದು ಅನಿವಾರ್ಯವಾಗಿದೆ. ಆದ್ದರಿಂದ ಬಂಡವಾಳವನ್ನು ನಿಗದಿಪಡಿಸಿರುವ ಪ್ರಮಾಣದಲ್ಲಿರಿಸಲು ಇರುವ ಕೆಲವೊಂದು ಆದಾಯುಗಳ ಕಡೆಗೆ ಗಮನಹರಿಸೋಣ.

● ಷೇರು ಬಂಡವಾಳವನ್ನು ಹೇಗಾದರೂ ಮಾಡಿ ಹೆಚ್ಚಿಸುವುದು. ಬಂಡವಾಳ ಮಾರುಕಟ್ಟೆಯಿಂದ ಬಂಡವಾಳ ಸಂಗ್ರಹಿಸಲು ಪ್ರಯತ್ನಿಸಬಹುದಾದರೂ ಅದು ಸದ್ಯದ ಪರಿಸ್ಥಿತಿಯಲ್ಲಿ ಯಶಸ್ವಿಯಾಗುವುದು ಅನುಮಾನದ ವಿಷಯ. ಆದ್ದರಿಂದ ಷೇರು ಬಂಡವಾಳವನ್ನು ಬ್ಯಾಂಕಿನ ನೌಕರರಿಂದ ಸಂಗ್ರಹಿಸಬಹುದು. ನೌಕರರ ಸಂಘದೊಂದಿಗೆ ಸಮಾಲೋಚಿಸಿ ಈ ಕ್ರಮ ಕೈಗೊಂಡು ಬಂಡವಾಳವನ್ನು ಹೆಚ್ಚಿಸಿಕೊಳ್ಳಬಹುದಾಗಿದೆ. ಸಾರ್ವಜನಿಕ ಉದ್ದಿಮೆಗಳು ಷೇರು ಬಂಡವಾಳದಲ್ಲಿ ಹಣ ತೊಡಗಿಸುವಂತೆ ಮಾಡಿ ಸಹ ಬಂಡವಾಳವನ್ನು ಸಂಗ್ರಹಿಸಬಹುದು.

● ಲಾಭಗಳಿಕೆಯನ್ನು ಕ್ರಮೇಣ ಹೆಚ್ಚುಗೊಳಿಸಿ ಮೀಸಲು ನಿಧಿಯನ್ನು ಬೆಳಸುತ್ತಾ ಹೋಗುವುದು.

● ಆಸ್ತಿಗಳ ಪುನರ್‌ಮೌಲ್ಯೀಕರಣ ಮಾಡಿ, ಪುನರ್‌ಮೌಲ್ಯೀಕರಣ ಮೀಸಲು ನಿಧಿಯನ್ನು ರೂಪಿಸುವುದರಿಂದ ಎರಡನೇ ವರ್ಗದ ಬಂಡವಾಳವನ್ನು ರೂಪಿಸಿದಂತಾಗುತ್ತದೆ.

● ಹೊಸ ಹಣಕಾಸು ಸಂಲೇಖಗಳನ್ನು ರೂಪಿಸಿ ಎರಡನೇ ವರ್ಗದ ಬಂಡವಾಳದ ಪ್ರಮಾಣವನ್ನು ಹೆಚ್ಚಿಸುವುದು.

● ನಷ್ಟಸಂಭಾವ್ಯತೆಯ ಘನತೆಯ ಮಾಪನ ಕಡಿಮೆ ಇರುವ ಆಸ್ತಿಗಳಲ್ಲಿ ಹೆಚ್ಚು ಹಣ ಹೂಡುವುದು.

● ಬ್ಯಾಂಕುಗಳು ನೀಡುವ ಉದರಿಯ ಗುಣಮಟ್ಟ ಕಾಯ್ದುಕೊಳ್ಳುವ ಮೂಲಕ ಲಾಭಾಂಶ ಗಳಿಕೆ ಹೆಚ್ಚಿಸಿ ಮೀಸಲು ನಿಧಿಯನ್ನು ಬೆಳಸುವುದು.

● ಅನುಮಾನಾಸ್ಪದವಾದ ಮತ್ತು ಹೋಕುಬಾಕಿ ಆಸ್ತಿಗಳನ್ನು ಆದಕ್ಕಾಗಿ ಮೀಸಲಾಗಿರುವ ಮೀಸಲು ನಿಧಿಯಿಂದ ವಜಾ ಹಾಕಿಕೊಂಡು ಆಸ್ತಿಯ ಪ್ರಮಾಣವನ್ನು ಕಡಿಮೆ ಮಾಡಿಕೊಳ್ಳುವುದು.

ಈ ಅನೇಕ ಉಪಾಯಗಳನ್ನು ಫಲಪ್ರದವಾಗಿ ಅನುಷ್ಠಾನಕ್ಕೆ ತರಲು ಒಂದು ಯೋಜಿತ ಕಾರ್ಯಕ್ರಮವನ್ನು ಹಾಕಿಕೊಂಡು ಅದರಂತೆ ಸದಾ ಕಾರ್ಯೋನ್ಮುಖವಾಗಬೇಕಾಗುತ್ತದೆ.

**ಮುಕ್ತಾಯ**

ಬಹಳ ವರ್ಷಗಳಿಂದ ಮೂಲೆಗೆ ಬಿದ್ದಿದ್ದ ಒಂದು ಪ್ರಮುಖ ವಿಷಯವಾದ ಈ ಬಂಡವಾಳದ ಪ್ರಮಾಣದ ಬಗೆಗಿನ ಈ ಹೊಸ ಆದೇಶ, ಪ್ರಾರಂಭದಲ್ಲಿ ಬಿಸಿತುಪ್ಪವಾದರೂ ಕಾಲಕ್ರಮೇಣ, ಅನುಷ್ಠಾನಗೊಳಿಸಿದಂತೆಲ್ಲಾ, ಬ್ಯಾಂಕುಗಳ ಸುಭದ್ರತೆಗೆ ನಾಂದಿಯಾಗುತ್ತದೆ. ಬಂಡವಾಳದ ಗಾತ್ರವನ್ನು ಕಾಪಾಡಿಕೊಳ್ಳಲು ಕೈಗೊಳ್ಳುವ ಅನೇಕ ಕ್ರಮಗಳಿಂದಾಗಿ ಸಾಲ ವಸೂಲಾತಿ, ಲಾಭಗಳಿಕೆ, ಹಾಗೂ ಉದರಿಗಳ ಗುಣಮಟ್ಟಗಳಲ್ಲಿ ಹೆಚ್ಚಳ ಉಂಟಾಗುವುದರಲ್ಲಿ ಸಂದೇಹವೇ ಇಲ್ಲ.

ಸರಕಾರ ಅಥವಾ ರಿಸರ್ವ್ ಬ್ಯಾಂಕ್ ಸಹ ಬಂಡವಾಳದ ಗಾತ್ರವನ್ನು ಹೆಚ್ಚು ಅಥವಾ ಕಡಿಮೆ ಮಾಡುವುದರಿಂದ ದೇಶದಲ್ಲಿ ಉದರಿ ಪ್ರಮಾಣವನ್ನು, ಆದರಿಂದಾಗಿ ಹಣದುಬ್ಬರವನ್ನು ಸಹ ನಿಯಂತ್ರಿಸಬಹುದು. ಕೇವಲ ಆಸ್ತಿಗಳಿಗೆ ಕೊಡುವ ನಷ್ಟ ಸಂಭಾವ್ಯತೆಯ ಘನತೆ ಅಂಕಗಳನ್ನು ಹೆಚ್ಚು ಕಡಿಮೆ ಮಾಡುವುದರಿಂದ ಉದ್ದೇಶಿತ ಕ್ಷೇತ್ರಗಳಿಗೆ ಉದರಿ ಲಭ್ಯವಾಗುವಂತೆ ಮಾಡಿ ಉದರಿಯ ಪ್ರಮಾಣ ಹಾಗೂ ಹಣದುಬ್ಬರವನ್ನು ನಿಯಂತ್ರಿಸಬಹುದು.

ಒಟ್ಟಿನಲ್ಲಿ ಬಂಡವಾಳದ ಪ್ರಮಾಣವನ್ನು ನಿಗದಿಪಡಿಸಿರುವುದು ಬ್ಯಾಂಕುಗಳ ಆರೋಗ್ಯದ ದೃಷ್ಟಿಯಿಂದ ಸ್ವಾಗತಾರ್ಹ. ★

# ಬಂಡವಾಳ ವಿಸ್ತರಣೆ ಹಾಗೂ ಬ್ಯಾಂಕುಗಳು

ಕೆ. ಎನ್. ಮಹಾಬಲ
ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ಶಾಖೆ

**ಬೇರೆ ಉದ್ಯಮಗಳಲ್ಲಿರುವಂತೆ ಬ್ಯಾಂಕುಗಳಲ್ಲಿ ಬಂಡವಾಳ ವಿಸ್ತರಣೆಯು ಅಗತ್ಯವಾಗಲಿ, ಅನಿವಾರ್ಯತೆಯಾಗಲಿ ಇಲ್ಲವೆಂದು ವಾದಿಸುವವರ ನಡುವೆಯೂ ಪ್ರಸಕ್ತ ಸನ್ನಿವೇಶದಲ್ಲಿ ಬ್ಯಾಂಕುಗಳು ತಮ್ಮ ಬಂಡವಾಳ ಮಟ್ಟವನ್ನು ವಿಸ್ತರಿಸಿಕೊಳ್ಳುವುದು ಹಲವಾರು ದೃಷ್ಟಿಗಳಿಂದ ಅಗತ್ಯವಾಗಿದೆ.**

**ರಿಸರ್ವ್** ಬ್ಯಾಂಕ್ ತನ್ನ 1990-91ರ ವಾರ್ಷಿಕ ವರದಿಯಲ್ಲಿ ಬ್ಯಾಂಕುಗಳು ತಮ್ಮ ಬಂಡವಾಳ ಬುನಾದಿಯನ್ನು ವಿಸ್ತರಿಸಿಕೊಳ್ಳುವ ಅಗತ್ಯವನ್ನು ಪ್ರತಿಪಾದಿಸಿದೆ. ಬ್ಯಾಂಕುಗಳ ಹಲವಂಡಿ ಉದರಿ ಸೃಷ್ಟಿ (Multiple Credit Creation) ಸಾಮರ್ಥ್ಯವನ್ನು ಗಣನೆಗೆ ತೆಗೆದುಕೊಂಡಾಗ, ಅವು ಶೂನ್ಯ ಬಂಡವಾಳ ನೆಲೆಯಲ್ಲಿ ಕಾರ್ಯ ನಿರ್ವಹಿಸಬಲ್ಲವು. ಬೇರೆ ಉದ್ಯಮಗಳಲ್ಲಿರುವಂತೆ ಅಲ್ಲಿ ಬಂಡವಾಳ ವಿಸ್ತರಣೆಯು ಅಗತ್ಯವಾಗಲೀ ಅನಿವಾರ್ಯತೆಯಾಗಲೀ ಇಲ್ಲ ಎಂದು ವಾದಿಸುವವರ ನಡುವೆಯೂ ಪ್ರಸಕ್ತ ಸನ್ನಿವೇಶದಲ್ಲಿ ಬ್ಯಾಂಕುಗಳು ತಮ್ಮ ಬಂಡವಾಳ ಮಟ್ಟವನ್ನು ವಿಸ್ತರಿಸಿಕೊಳ್ಳುವುದು ಹಲವಾರು ದೃಷ್ಟಿಗಳಿಂದ ಅತ್ಯಗತ್ಯವಾಗಿದೆ.

### ಅಸಮತೆ

ಪ್ರಸ್ತುತ ಎಲ್ಲ ಬ್ಯಾಂಕುಗಳು ಬಂಡವಾಳದ ವಿಷಯದಲ್ಲಿ ಏಕರೂಪತೆಯನ್ನು ಹೊಂದಿಲ್ಲ. ರಾಷ್ಟ್ರೀಕೃತ ಬ್ಯಾಂಕುಗಳು ಇನ್ನೂ ತಮ್ಮ ರಾಷ್ಟ್ರೀಕರಣದ ಸಮಯದ ಬಂಡವಾಳ ಮೊತ್ತವನ್ನೇ ಹೊಂದಿವೆ. ಖಾಸಗಿ ವಲಯದ ಬ್ಯಾಂಕುಗಳು ಬಂಡವಾಳವನ್ನು ತಮ್ಮ ಭೌಗೋಳಿಕ ನೆಲೆಗೆ ಆಧಾರವಾಗಿ ಹೊಂದಿದ್ದರೆ, ವಿದೇಶೀ ಬ್ಯಾಂಕುಗಳು ಭಾರತದಲ್ಲಿ ತಾವು ತೊಡಗಿಸಿರುವ ಶೇಕಡ 3.5 ರಷ್ಟನ್ನು ಬಂಡವಾಳವಾಗಿ ಹೊಂದಿರುತ್ತವೆ.

ಬಂಡವಾಳ ರೂಢಿಮಟ್ಟದಲ್ಲಿನ ಈ ಅಸಮತೆಯನ್ನು ನರಸಿಂಹಂ ಸಮಿತಿ ಗುರುತಿಸಿದೆ. ಬಾಸ್ಲೆ ಸಮಿತಿ ರೂಢಿಮಟ್ಟ ಆಧರಿಸಿ, ಬ್ಯಾಂಕುಗಳು ಮಾರ್ಚ್ 93ರೊಳಗೆ ತಮ್ಮ ನಷ್ಟಸಂಭಾವ್ಯ ಆಸ್ತಿಗಳ ಕನಿಷ್ಠ ಶೇಕಡ 4ರಷ್ಟನ್ನು ಬಂಡವಾಳವಾಗಿ ಹೊಂದಬೇಕೆಂದು ನರಸಿಂಹಂ ಸಮಿತಿ ಶಿಫಾರಸು ಮಾಡಿದೆ.

ಸ್ವಾಭಾವಿಕವಾಗಿ ಭಾರತದ ಸಾರ್ವಜನಿಕ ಬ್ಯಾಂಕುಗಳ ಕನಿಷ್ಠ ಬಂಡವಾಳ ಮಟ್ಟವು ವಿಶೇಷ ಕಾಳಜಿಯ ವಿಷಯವಾಗಿದೆ. ಬ್ಯಾಂಕಿಂಗ್ ಉದ್ಯಮದ ದೃಢತೆ ಹಾಗೂ ಸಾರ್ವಜನಿಕ ವಿಶ್ವಾಸಾರ್ಹತೆಗಳು ಸಾರ್ವಜನಿಕ ಹಿತ ಹಾಗೂ ಧೋರಣೆಗಳನ್ನು ಪ್ರತಿಫಲಿಸುತ್ತವೆ. ಬ್ಯಾಂಕುಗಳ ಲಾಭಪ್ರದತೆಯ ಮಟ್ಟ ಕ್ಷೀಣಿಸಲು ಕಡಿಮೆ ಬಂಡವಾಳ ಮಟ್ಟವೂ ಕಾರಣವಾಗಿದೆ.

### ಬಂಡವಾಳದ ಸ್ವರೂಪ

ಬಂಡವಾಳ ನಿಧಿಯು ಸಾಮಾನ್ಯವಾಗಿ ಷೇರು ಬಂಡವಾಳ, ಮುಕ್ತ ಮೀಸಲುಗಳು ಮತ್ತು ದೀರ್ಘಾವಧಿ ಸಾಲಗಳನ್ನು ಒಳಗೊಂಡಿರುತ್ತವೆ. ಆದರೆ ಬ್ಯಾಂಕುಗಳ ದೀರ್ಘಾವಧಿ ಸಾಲ (ನಿಧಿ) ಮಹತ್ವದ್ದಲ್ಲವಾದ್ದರಿಂದ, ಬ್ಯಾಂಕುಗಳ ಬಂಡವಾಳವೆಂದರೆ ಷೇರು ಬಂಡವಾಳ ಮತ್ತು ಮೀಸಲುಗಳು ಮಾತ್ರ. ಬ್ಯಾಂಕುಗಳಲ್ಲಿ ಬಂಡವಾಳ ಸಾಕಷ್ಟು ಪ್ರಮಾಣದಲ್ಲಿ ಇದೆಯೇ ಅಥವಾ ಇಲ್ಲವೇ ಎಂಬುದನ್ನು ತೀರ್ಮಾನಿಸುವ ಸಾಮಾನ್ಯ ಕ್ರಮಗಳೆಂದರೆ:

1 ಬಂಡವಾಳ ನಿಧಿಗೂ ಠೇವಣಿಗಳಿಗೂ ಇರುವ ಅನುಪಾತ,
2 ಬಂಡವಾಳ ನಿಧಿ ಹಾಗೂ ನಷ್ಟಸಂಭಾವ್ಯ ಆಸ್ತಿಗಳಿಗೆ ಇರುವ ಅನುಪಾತ,
3 ಬಂಡವಾಳ ನಿಧಿ ಹಾಗೂ ಸ್ಥಿರಾಸ್ತಿ, ವಿನಿಯೋಜನ ಮೊತ್ತಗಳಿಗೂ ಇರುವ ಅನುಪಾತ.

ಬ್ಯಾಂಕುಗಳ ಉತ್ಪಾದಕತೆ, ದಕ್ಷತೆ, ಲಾಭಪ್ರದತೆಗಳನ್ನು ಕುರಿತ ರಿಸರ್ವ್ ಬ್ಯಾಂಕ್ ಸಮಿತಿಯು, ಬ್ಯಾಂಕುಗಳು ತಮ್ಮ ಒಟ್ಟು ಠೇವಣಿಯ ಶೇ. 3ರಷ್ಟನ್ನು ಬಂಡವಾಳ ನಿಧಿಯನ್ನಾಗಿ ಹೊಂದಬೇಕೆಂದು ಶಿಫಾರಸು ಮಾಡಿದೆ. ಲಾಭದ ಶೇ. 40ರಷ್ಟನ್ನು ಬಂಡವಾಳ ನಿಧಿಗೆ ವರ್ಗಾಯಿಸಿದರೂ ಈ ಅನುಪಾತ ತಲುಪಲು ಸಾಧ್ಯವಾಗಲಿಲ್ಲ.

### ಹಿಮ್ಮತವಿಲ್ಲ

ಬ್ಯಾಂಕಿಂಗ್ ಉದ್ಯಮ ಅಥವಾ ಯಾವುದೇ ಉದ್ಯಮದ ಸ್ವಾಸ್ಥ್ಯವು ಅನಿರೀಕ್ಷಿತ ಆಘಾತವನ್ನು ಎದುರಿಸಲು ಅಗತ್ಯವಾದ ಬಂಡವಾಳ ನಿಧಿಯ ಮೊತ್ತವನ್ನು ಆಧರಿಸಿರುತ್ತದೆ. ಬ್ಯಾಂಕ್ ಒಂದರ ಯಥೋಚಿತ ಬಂಡವಾಳ ಮಟ್ಟ ಎಷ್ಟು ಎಂಬುದರ



೨

ಬಗ್ಗೆ ಒಮ್ಮತದ ಅಭಿಪ್ರಾಯವಿಲ್ಲ. ಬ್ಯಾಂಕುಗಳು ಹಣಕಾಸು ಮಧ್ಯಸ್ಥಿಕೆದಾರರಾದ್ದರಿಂದ, ಅಗಾಧವಾದ ಬಂಡವಾಳದ ಅಗತ್ಯವಿಲ್ಲ ಎಂಬುದು ಕೆಲವರ ಅಭಿಮತವಾದರೆ, ಬಂಡವಾಳ ನಿಧಿಯು ನಿರ್ವಹಿಸುವ ಪ್ರಮುಖ ಕಾರ್ಯ ಗಮನಿಸಿದಲ್ಲಿ, ಬಂಡವಾಳವೇ ಬೇಡವೆನ್ನುವವರ ವಾದ ವಿಪರೀತ ಅನಿಸಿಕೆ ಎಂದು ಮತ್ತೆ ಹಲವರ ಅಭಿಪ್ರಾಯ.

ಸಾರ್ವಜನಿಕ ವಲಯ ಬ್ಯಾಂಕುಗಳು ಆಸ್ತಿಗಳ ಶೇ. 8ರಷ್ಟು ಬಂಡವಾಳ ಹೊಂದುವುದು ವಿಹಿತವೆಂದು ವಾದಿಸಲಾಗುತ್ತಿದೆ. ಸಾಮ್ಯ ಬಂಡವಾಳದ ಒಂದು ಭಾಗವನ್ನು ಸಾರ್ವಜನಿಕರಿಗೆ ಮಾರಾಟ ಮಾಡುವುದು ಅನಿವಾರ್ಯವೆನಿಸಿದೆ. ಸಾರ್ವಜನಿಕ ವಲಯ ಬ್ಯಾಂಕುಗಳ ಬಂಡವಾಳ ಬುನಾದಿಯನ್ನು ಬಲಪಡಿಸಲು ಸರ್ಕಾರ ಈಗಾಗಲೇ ರೂ. 2,600 ಕೋಟಿ ಮಂತಿಗೆ ನೀಡಿದ್ದರೂ, ಶೇ. 8 ಪ್ರಮಾಣ ತಲುಪಲು, ಇನ್ನೂ ರೂ. 8,000 ಕೋಟಿ ಅಗತ್ಯವಿದೆ. ಸರ್ಕಾರದ ಹಣವನ್ನು ಧಕ್ಕೆಗೊಳಿಸದೆ ಈ ಗುರಿ ತಲುಪಬೇಕಾದರೆ, ಸಾರ್ವಜನಿಕರಿಂದ ಷೇರು ಹಣ ಸಂಗ್ರಹಿಸುವುದು ಅನಿವಾರ್ಯವಾಗುತ್ತದೆ.

ದೇಶೀಯ ಬ್ಯಾಂಕಿಂಗ್‌ನಲ್ಲಿ ಸ್ಪರ್ಧಾತ್ಮಕತೆ ಹಾಗೂ ದಕ್ಷತೆ ತರುವ ದೃಷ್ಟಿಯಿಂದ ಖಾಸಗಿ ವಲಯದ ಬ್ಯಾಂಕುಗಳಿಗೆ ಅವಕಾಶ ಮಾಡಿಕೊಡಬೇಕಾಗುತ್ತದೆ. ಬ್ಯಾಂಕುಗಳ ಖಾಸಗೀಕರಣಕ್ಕೂ ಮೊದಲು ಬಿಗಿ ನೀತಿ, ಕಠಿಣ ಸಾಲ ನೀಡಿಕೆ ಪ್ರಕ್ರಿಯೆ, ಕಾರ್ಯ ನಿರ್ವಹಣಾ ಸ್ವಾತಂತ್ರ್ಯದ ಕೊರತೆ ಮುಂತಾದುವನ್ನು ದೂರ ಮಾಡಬೇಕಾಗುತ್ತದೆ. ತಮ್ಮ ಸೇವೆಗಳಿಗೆ ಮೌಲ್ಯ ನಿಷ್ಕರ್ಷೆ ಮಾಡುವ ಸ್ವಾತಂತ್ರ್ಯವನ್ನೂ ಬ್ಯಾಂಕುಗಳಿಗೇ ಬಿಟ್ಟುಕೊಡಬೇಕಾಗುತ್ತದೆ.

ಬಂಡವಾಳ ನಿಧಿಯು ಚಾಲ್ತಿ ನಿರ್ವಹಣಾ ನಷ್ಟವನ್ನಾಗಲಿ, ನಿರೀಕ್ಷಿತ ನಷ್ಟವನ್ನಾಗಲಿ ಭರಿಸುವ ಸಂಪನ್ಮೂಲವಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು. ಇಂದು ವಾಣಿಜ್ಯ ಬ್ಯಾಂಕುಗಳ ಕಾರ್ಯನಿರ್ವಹಣಾ ವ್ಯಾಪ್ತಿ ಎಷ್ಟು ವಿಶಾಲವಾದುದೆಂದರೆ ಬಂಡವಾಳ ನಿಧಿಯಿಂದ ಚಾಲ್ತಿ ನಷ್ಟಕ್ಕೆ ಹೊಂದಿಸುವ ಕೆಲಸ ಅಸಾಧ್ಯವಾಗಿದೆ. ನಷ್ಟವಾಗುವುದೆಂಬ ಸೂಚನೆಯಿರುವ ಎಲ್ಲಾ ನಷ್ಟಗಳನ್ನೂ ಚಾಲ್ತಿ ವರಮಾನ ಮತ್ತು ಹೆಚ್ಚುವರಿಗಳ ಮೂಲಕವೇ ಸರಿಹೊಂದಿಸಬೇಕಾಗಿದೆ. ಆದ್ದರಿಂದ ಬ್ಯಾಂಕುಗಳ ಬಂಡವಾಳ ನಿಧಿಯ ಬಗ್ಗೆ ಚರ್ಚಿಸುವಾಗಲೆಲ್ಲ ಬ್ಯಾಂಕುಗಳ ವರಮಾನವನ್ನೂ ಗಮನಿಸುವುದು ವಿಹಿತ. ವರಮಾನವು ಎಲ್ಲ ಸಂಸ್ಥೆಗಳ ರಕ್ಷಣೆಯ ಮೊದಲ ಸಾಲು ಎನಿಸಿದೆ. ಸಾಮಾನ್ಯಋಣಿ, ಠೇವಣಿದಾರ ಮತ್ತು ದೀರ್ಘಾವಧಿ ಸಾಲ ನೀಡಿಕೆದಾರರ ವರಮಾನ ಸಂರಕ್ಷಿಸುತ್ತದೆ. ಮತ್ತು ರಕ್ಷಣೆಯ ಅಂತಿಮ ಸಾಲು ಎನಿಸಿರುವ ಷೇರು ಬಂಡವಾಳವನ್ನೂ ಅದು ತಂದುಕೊಡುತ್ತದೆ. ಆದಾಗ್ಯೂ, ಅಂತರರಾಷ್ಟ್ರೀಯ ಇತ್ಯರ್ಥ ಬ್ಯಾಂಕ್ ಸ್ಥಾಪಿಸಿರುವ ಬಾಸ್ಲೆ ಸಮಿತಿ ಮತ್ತು ಪೀಟರ್ ಕುಕ್ ಸಮಿತಿಗಳ ದೃಷ್ಟಿಯಿಂದ ಬ್ಯಾಂಕುಗಳ ಬಂಡವಾಳದ ಬುನಾದಿ ವಿಸ್ತರಿಸುವುದು ಅಗತ್ಯವೆಂದು ರಿಸರ್ವ್ ಬ್ಯಾಂಕ್ ಪರಿಗಣಿಸಿದೆ. ಬ್ಯಾಂಕುಗಳ ಬಂಡವಾಳದಲ್ಲಿ ಏಕರೂಪತೆಯನ್ನು ಸಾಧಿಸುವ ದೃಷ್ಟಿಯಿಂದ ಬಾಸ್ಲೆ ಸಮಿತಿ ಬಂಡವಾಳ ಮತ್ತು ಮೀಸಲು ಹಾಗೂ ನಷ್ಟಸಂಭಾವ್ಯ ಆಸ್ತಿಗಳ ನಡುವಣ ಅನುಪಾತ ಶೇ. 8 ಇರಬೇಕೆಂದು ಶಿಫಾರಸು ಮಾಡಿದೆ. ಭಾರತವು ಬಾಸ್ಲೆ ಒಪ್ಪಂದದ ಬೆಂಬಲಿಗ ರಾಷ್ಟ್ರವಾದ್ದರಿಂದ ಈ ಮಾನದಂಡವನ್ನು ಅಳವಡಿಸಿಕೊಳ್ಳುವುದು ಅಗತ್ಯವಾಗಿದೆ.

### ಬಂಡವಾಳ ವಿಸ್ತರಣೆ

ರಿಸರ್ವ್ ಬ್ಯಾಂಕ್ ಮಾಜಿ ಗವರ್ನರ್ ವೆಂಕಟರಮಣನ್ ಬ್ಯಾಂಕುಗಳಲ್ಲಿ ಹಲವಾರು ಕ್ರಮಗಳನ್ನು ಸೂಚಿಸಿದ್ದಾರೆ. ಸಾರ್ವಜನಿಕ ವಲಯದ ಕಂಪನಿಗಳು ಬ್ಯಾಂಕ್ ಷೇರುಗಳಲ್ಲಿ ವಿನಿಯೋಜಿಸುವುದು ಆ ಕ್ರಮಗಳಲ್ಲಿ ಒಂದು. ಆದರೆ ವಿಶ್ವಬ್ಯಾಂಕ್ ಬಜೆಟ್‌ನ ಮೂಲಕ ಬಂಡವಾಳ ನೆರವು ನೀಡುವುದನ್ನು ಆಕ್ಷೇಪಿಸಿದೆ. ಈ ಬಂಡವಾಳ ಕೊರತೆಯನ್ನು ಎದುರಿಸುವ ಮತ್ತೊಂದು ಉಪಾಯವೆಂದರೆ ಸ್ವಾಸ್ಥ್ಯ ಸಂಕೇತದ ಎರಡು ಮತ್ತು ಮೂರು ಸಂಖ್ಯೆಯನ್ನು ರದ್ದುಗೊಳಿಸುವುದು. ಅಥವಾ ಗೃಹ ಹಣಕಾಸು ಸಂಸ್ಥೆಗಳು ಯೋಜಿಸಿರುವಂತೆ ಅಡಮಾನ ಆಧಾರಿತ ಪ್ರತಿಭೂತೀಕರಣವನ್ನು ಆಶ್ರಯಿಸುವುದು. ಆದರೆ ಬ್ಯಾಂಕುಗಳು ದಸ್ತಾವೇಜು ಆಧಾರವಿಲ್ಲದ ಅಲ್ಪಾವಧಿ ಸಾಲಗಳನ್ನು ಹೊಂದಿರುವುದರಿಂದ ಪ್ರತಿಭೂತೀಕರಣ ಸುಲಭವಲ್ಲ.

ಏನೇ ಆಗಲಿ, ಬ್ಯಾಂಕುಗಳು ದ್ರವತ್ವನಿಧಿಗಳ ಲಾಭಕರ ವಿನಿಯೋಜನೆಯತ್ತ ಗಮನ ಹರಿಸಬೇಕಾಗಿದೆ. ಅಲ್ಪಾವಧಿ ಪತ್ರಗಳು, ಭಾಗೀದಾರಿ ಪ್ರಮಾಣ ಪತ್ರ, ಈ ನಿಟ್ಟಿನಲ್ಲಿ ನೆರವಾಗಬಲ್ಲುವು. ವಾಣಿಜ್ಯ ಬ್ಯಾಂಕು ಬಾಂಡು, ಷೇರು, ಡಿಬೆಂಚರುಗಳ ಅಲ್ಪಾವಧಿ ಮಾರುಕಟ್ಟೆಯನ್ನು ಪ್ರವೇಶಿಸುವುದೂ ಪ್ರಸ್ತುತ. ಅಲ್ಲದೆ ಬಡ್ಡೀತರ ವರಮಾನಮೂಲವಾದ ವಿನಿಯೋಜನ ನಿರ್ವಹಣೆ, ಸಲಹಾ ಸೇವೆ, ರಫ್ತು ಸಲಹಾ ಸೇವೆ, ಪರಿಯೋಜನಾ ಹಣಕಾಸು ಅನ್ವೇಷಿಸಲೂ ಅನಂತ ಅವಕಾಶಗಳಿವೆ. ಬಂಡವಾಳ ವಿಸ್ತರಣೆಯಲ್ಲಿ ಇವುಗಳ ಪಾತ್ರವನ್ನೂ ಯಾರೂ ಅಲ್ಲಗಳೆಯಲಾಗದು.

ಘೋಷ್‌ರವರ ಅಧ್ಯಕ್ಷತೆಯಲ್ಲಿ ನೇಮಿಸಲಾದ ಉನ್ನತಾಧಿಕಾರ ಸಮಿತಿಯ ವರದಿಯಂತೆ ಬ್ಯಾಂಕುಗಳ ಲಾಭನಷ್ಟ ಖಾತೆ ಹಾಗೂ ಆಸ್ತಿಹೊಣೆ ತಃಖ್ತೆಗಳಲ್ಲಿ ಹೊಸ ನಮೂನೆ ಜಾರಿಗೆ ಬಂದಿರುವುದು ಗಮನಿಸಬೇಕಾದ ಮತ್ತೊಂದು ಸಂಗತಿಯಾಗಿದೆ. ಅದರಂತೆ ಬ್ಯಾಂಕಿನ ಲಾಭ ನಷ್ಟ ಖಾತೆಯಲ್ಲಿ ಪ್ರಕಟಿಸಲಾದ ನಿವ್ವಳ ಲಾಭವನ್ನು ಕಾನೂನುಬದ್ಧ ತೆರಿಗೆ, ಕರಡು ಸಾಲ ಮೀಸಲು, ಸರ್ಕಾರಿ ಅನುಮೋದಿತ ಪ್ರತಿಭೂತಿಗಳ ಮಾರುಕಟ್ಟೆ ಮೌಲ್ಯ ಅಥವಾ ವೆಚ್ಚಕ್ಕಿಂತ ಕಡಿಮೆ ಹೊಂದಾಣಿಕೆ, ಆಪತ್ಕಾಲ ನಿಧಿ ಮುಂತಾದುವನ್ನು ಹೊಂದಾಣಿಕೆ ಮಾಡಿದ ನಂತರ ತೋರಿಸಬೇಕಾಗುತ್ತದೆ.

ಮತ್ತೊಂದು ಬೆಳವಣಿಗೆಯೆಂದರೆ, ಇತ್ತೀಚಿಗೆ ಭಾರತೀಯ ಬ್ಯಾಂಕುಗಳು ಹೆಚ್ಚುಹೆಚ್ಚಾಗಿ ವಿದೇಶಿ ಬ್ಯಾಂಕ್ ಮತ್ತು ಹಣಕಾಸು ಸಂಸ್ಥೆಗಳೊಂದಿಗೆ ವ್ಯವಹಾರ ನಡೆಸುತ್ತಿದೆ. ಇಂಥ ಸಂದರ್ಭದಲ್ಲಿ ಸಾಲ, ನೆರವು ನೀಡುವ ವಿದೇಶಿ ಬ್ಯಾಂಕ್ ಅನಿವಾರ್ಯವಾಗಿ ಭಾರತೀಯ ಬ್ಯಾಂಕುಗಳಿಂದ ಆಸ್ತಿ–ಹೊಣೆ ತಃಖ್ತೆಗಳನ್ನು ಬಯು

ಸುತ್ತವೆ ಮತ್ತು ಬಂಡವಾಳ ಮೂಲವೆಷ್ಟಿದೆಯೆಂಬುದನ್ನು ಸಾಲ ನೀಡುವ ಬ್ಯಾಂಕ್ ವಿಶೇಷವಾಗಿ ಗಮನಿಸುತ್ತದೆ. ಬಂಡವಾಳ ನಿಧಿಯು ಅನಿರೀಕ್ಷಿತ ನಷ್ಟಗಳನ್ನು ಹೀರಿಕೊಳ್ಳಬಲ್ಲುದೇ ಎಂಬುದನ್ನೂ ಪರಿಶೀಲಿಸುತ್ತದೆ. ಇಂಥ ಒಂದು ಸ್ಥಿತಿಯು ಭಾರತೀಯ ಬ್ಯಾಂಕುಗಳನ್ನು ಬಂಡವಾಳ ನಿಧಿಗಳನ್ನು ವಿಸ್ತರಿಸಿಕೊಳ್ಳಲು ಪ್ರೇರೇಪಿಸಿವೆ.

ಭಾರತೀಯ ಬ್ಯಾಂಕುಗಳಲ್ಲಿ ದೊಡ್ಡದೆನಿಸಿರುವ ಭಾರತೀಯ ಸ್ಟೇಟ್ ಬ್ಯಾಂಕ್ ಬಂಡವಾಳ ವಿಸ್ತರಣೆಗೆ ಕೈಹಾಕಿದ ಮೊದಲ ಬ್ಯಾಂಕ್ ಆಗಿದೆ. ಅದು 1985ರಲ್ಲೇ ತನ್ನ ಅಧಿಕೃತ ಬಂಡವಾಳ ವಿಸ್ತರಿಸಿ, ಈಗ ಅದು ರೂ. 1,000 ಕೋಟಿ ತಲುಪಿದೆ. ಸಂದಾಯವಾದ ಬಂಡವಾಳ ರೂ. 200 ಕೋಟಿಗಳಷ್ಟಿದೆ. ಗಮನಾರ್ಹವಾದ ಸಂಗತಿಯೆಂದರೆ, ಭಾರತೀಯ ಸ್ಟೇಟ್ ಬ್ಯಾಂಕಿನ ರೂ. 100 ಮುಖಬೆಲೆಯ ಷೇರು ರೂ. 160ಕ್ಕೆ ಮಾರಾಟವಾಗಿತ್ತು.

ಅಂತೂ ಭಾರತೀಯ ಬ್ಯಾಂಕುಗಳ ಷೇರು ಬಂಡವಾಳ 1951ರಲ್ಲಿ ಠೇವಣಿಯ ಶೇ. 2ರಷ್ಟು ಇದ್ದದ್ದು, ಡಿಸೆಂಬರ್ 1990ರಲ್ಲಿ 1.1ಕ್ಕೆ ಕುಸಿದಿದೆ. ಆದ್ದರಿಂದ ಬಂಡವಾಳ ವಿಸ್ತರಣೆಗೆ ಈಗ ಕಾಲ ಪಕ್ವವಾಗಿದೆ. ಬ್ಯಾಂಕುಗಳಂಥ ನಿಧಿ ಪ್ರಧಾನ ಹಾಗೂ ಸರ್ಕಾರಿ ನಿಯಂತ್ರಿತ ವ್ಯವಸ್ಥೆಯಲ್ಲಿ ಅಗಾಧ ಬಂಡವಾಳ ಅನಾವಶ್ಯಕ ಎಂಬ ವಾದ ಪ್ರಬಲವಾಗಿರಬಹುದು. ಆದರೆ ಆಂತರಿಕ ದೃಢತೆ ಹಾಗೂ ಅಂತರರಾಷ್ಟ್ರೀಯ ವಿಶ್ವಾಸಾರ್ಹತೆಗಾಗಿ ಬಂಡವಾಳ ವಿಸ್ತರಣೆ ಅತ್ಯಗತ್ಯವಾದುದು ಎಂಬ ಮಾತು ಒರಿಯ ವಾದವಲ್ಲ, ವಾಸ್ತವ ಕೂಡ.

* * *

**ಅನುಬಂಧ**

**ಬಾಸ್ಲೆ ಸಮಿತಿ :** ಅಂತರರಾಷ್ಟ್ರೀಯ ಇತ್ಯರ್ಥ ಬ್ಯಾಂಕ್ (ಬ್ಯಾಂಕ್ ಫಾರ್ ಇಂಟರ್‌ನ್ಯಾಷನಲ್ ಸೆಟ್ಲ್‌ಮೆಂಟ್) ಸ್ಥಾಪಿಸಿರುವ ಸಮಿತಿ. ಅಂತರರಾಷ್ಟ್ರೀಯ ಬ್ಯಾಂಕುಗಳ ನಡುವೆ ಇರುವ ಸ್ಪರ್ಧಾತ್ಮಕ ಅಸಮಂತೆಗಳನ್ನು ನಿವಾರಿಸಲು ಉಪಾಯ ಸೂಚಿಸುವುದು ಇದರ ಉದ್ದೇಶ.

ಬಾಸ್ಲೆ ಸಮಿತಿ ಒಪ್ಪಂದವನ್ನು ನಾಲ್ಕು ಭಾಗಗಳಲ್ಲಿ ನೀಡಲಾಗಿದೆ :

* ಬಂಡವಾಳದ ವ್ಯಾಖ್ಯೆ
* ನಷ್ಟಸಂಭಾವ್ಯತೆ ಮಾಪನ ವಿಧಾನ (Risk Weighting)
* ಕನಿಷ್ಠ ಬಂಡವಾಳ ಅನುಪಾತ
* ಸ್ಥಿತ್ಯಂತರ ವ್ಯವಸ್ಥೆ

ಒಪ್ಪಂದವು ಎರಡು ಸ್ತರಗಳಲ್ಲಿ ಬಂಡವಾಳವನ್ನು ವ್ಯಾಖ್ಯಿಸುತ್ತದೆ :

**ಒಂದನೆ ಸ್ತರ :** ಪ್ರಧಾನ ಬಂಡವಾಳ, ಷೇರು ಬಂಡವಾಳ, ಘೋಷಿತ ಮೀಸಲುಗಳು, ಅಪರಿವರ್ತನೀಯ ಅಧಿಮಾನ್ಯ ಷೇರುಗಳನ್ನು ಇದು ಒಳಗೊಂಡಿರುತ್ತದೆ.

**ಎರಡನೆ ಸ್ತರ :** ಸಹಾಯಕ ಬಂಡವಾಳ, ಅಘೋಷಿತ ಅಥವಾ ಸುಪ್ತ ಮೀಸಲುಗಳು, ಪುನರ್‌ಮೌಲ್ಯಗೊಂಡ ಮೀಸಲುಗಳು, ಸಾಮಾನ್ಯ ಉಪಬಂಧಗಳು, ಸಾಲ ನಷ್ಟ ಮೀಸಲು, ಆವರ್ತಕ ಅಧಿಮಾನ ಷೇರುಗಳನ್ನು ಇದು ಒಳಗೊಂಡಿದೆ.

**ನಷ್ಟಸಂಭಾವ್ಯತಾ ಮಾನದಂಡಗಳು**

ಬ್ಯಾಂಕ್ ಆಫ್ ಇಂಗ್ಲೆಂಡ್ ಈಗಾಗಲೇ ಬ್ರಿಟಿಷ್ ಬ್ಯಾಂಕ್‌ಗಳ ವಿಷಯದಲ್ಲಿ ಹೊಂದಿರುವ ಐದು ನಷ್ಟಸಂಭಾವ್ಯತಾ ಮಾನದಂಡಗಳನ್ನೇ ಸಮಿತಿಯೂ ಅಳವಡಿಸಿಕೊಂಡಿದೆ. ಅವುಗಳೆಂದರೆ—

1 ವಾಯಿದೆ,
2 ಪ್ರತಿರಕ್ಷೆಯ ಸ್ವರೂಪ,
3 ಪ್ರತಿರಕ್ಷೆಯ ಭೌಗೋಳಿಕ ಮೂಲ,
4 ಪೂರಕ ಆಸ್ತಿಗಳ ಉಪಸ್ಥಿತಿ,
5 ವ್ಯವಹಾರದ ಚಲಾರ್ಥ (ಕರೆನ್ಸಿ)

**ಬಂಡವಾಳ ಅನುಪಾತ :** ನಷ್ಟಸಂಭಾವ್ಯ ಆಸ್ತಿಗಳ ಕನಿಷ್ಠ ಶೇ. 8ರಷ್ಟು ಬಂಡವಾಳ ಇರಬೇಕೆಂದು ಒಪ್ಪಂದ ಪ್ರತಿಪಾದಿಸುತ್ತದೆ. ಇದರಲ್ಲಿ ಪ್ರಧಾನ ಬಂಡವಾಳ ಕನಿಷ್ಠ ಶೇ. 4ರಷ್ಟು ಇರಬೇಕು. ಈ ಗುರಿಯನ್ನು 1992ರೊಳಗೆ ತಲುಪಬೇಕೆಂದೂ ಅದು ನಿರ್ದೇಶಿಸುತ್ತದೆ. ★

# ಆದಾಯ ಗುರುತಿಸುವಿಕೆ ಮತ್ತು ಆಸ್ತಿ ವರ್ಗೀಕರಣ

**ಕೆ. ಎಸ್. ಭದ್ರಣ್ಣ**

ಉಪ ವ್ಯವಸ್ಥಾಪಕ, ಕೇಂದ್ರ ವಲಯ, ಮೈಸೂರು ಬ್ಯಾಂಕು, ಬೆಂಗಳೂರು

ಅಸಲಿಗೇ ಮೋಸ, ಬಡ್ಡಿಗೆ ಗುದ್ದಾಟ ಎಂಬ ಗಾದೆಯಂತೆ, ಕೊಟ್ಟ ಸಾಲ ವಸೂಲಾಗದ ಸ್ಥಿತಿ ಇದ್ದಾಗ ಅದರ ಮೇಲಣ ಬಡ್ಡಿಯನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಾಗಲಿ, ಎಲ್ಲ ಸಾಲಗಳನ್ನೂ ಆಸ್ತಿಯೆಂದಾಗಲಿ ಪರಿಗಣಿಸುವುದು ಬ್ಯಾಂಕುಗಳಿಗೆ ಇನ್ನು ಮುಂದೆ ಸಾಧ್ಯವಿಲ್ಲ.

**ಶೂನ್ಯದಿಂದ** ಏನನ್ನೂ ಸೃಷ್ಟಿಸಲು ಸಾಧ್ಯವಿಲ್ಲ ಎಂಬುದು ಸ್ವತಃ ಸಿದ್ಧವಾದದ್ದು. ಇದಕ್ಕೆ ಅಪವಾದವಾಗಿ ಭಾರತೀಯ ಬ್ಯಾಂಕುಗಳು ಇಲ್ಲದ ಲಾಭವನ್ನು ಸೃಷ್ಟಿಸಿ ತೆರಿಗೆ ಕಟ್ಟಿ ಲಾಭಾಂಶವನ್ನು ಹಂಚಿದ್ದು ವಿಚಿತ್ರವಾದರೂ ಸತ್ಯ ಹಾಗೂ ಈಗ ಚರಿತ್ರೆ.

ಅವಾಸ್ತವಿಕ ಲೆಕ್ಕಗಳ ಸುಂದರ ಮುಖವಾಡಗಳನ್ನು ಧರಿಸಿ ತಮ್ಮ ಬೇರುಗಳನ್ನೇ ಬಾಡಿಸಿಕೊಳ್ಳುತ್ತಿದ್ದ ಬ್ಯಾಂಕುಗಳತ್ತ ಸರ್ಕಾರದ ಗಮನ ಆರ್ಥಿಕ ಉದಾರೀಕರಣದ ಸಮಯದಲ್ಲಿ ಹರಿಯಿತು. ಇದು ಠೇವಣಿದಾರರ ಅದೃಷ್ಟ. ಮುಂದೆ ನಡೆಯಬಹುದಾಗಿದ್ದ ಅನಾಹುತವನ್ನು ತಪ್ಪಿಸುವ ಪ್ರಯತ್ನಕ್ಕೆ ಇದು ನಾಂದಿಯಾಯಿತು. ಇದು ಸಮಾಧಾನಕರ ಅಂಶ.

ಸರ್ಕಾರ ಈ ಬಗ್ಗೆ ಕಣ್ಣು ತೆರೆಯುತ್ತಿತ್ತೊ ಇಲ್ಲವೊ ? ಆದರೆ ಅದು ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಸಾಲ ಬೇಡಿದಾಗ ಅವು ಹಾಕಿದ ಷರತ್ತುಗಳಿಂದಾಗಿ ನಮ್ಮ ಹಣಕಾಸು ಸಂಸ್ಥೆಗಳ ಸುಧಾರಣೆ ಅನಿವಾರ್ಯವಾಯಿತು. ಬ್ಯಾಂಕುಗಳ ದುರವಸ್ಥೆಗೆ ಕಾರಣಗಳು ಹಲವಾರು. ಅದರಲ್ಲಿ ಮುಖ್ಯವೆಂದರೆ :

1 ಮೊದಲಿಗೆ ಠೇವಣಿದಾರರ ರಕ್ಷಣೆಗೆ ಎಂದು ವಿಧಿಸಿದ "ಪರಿನಿಯತ, ದ್ರವತ್ವ ಅನುಪಾತ", "ನಗದು ಮೀಸಲು ವಿಧಿ" ಇವು ಕಡೆಕಡೆಗೆ ಸರ್ಕಾರಕ್ಕೆ ಹಣ ಬೇಕಾದಾಗಲೆಲ್ಲ ಬಳಸಲು ಅನುವಾಗಿ ಸಾಲಗಳಿಗೆ ಹಣವಿಲ್ಲದಂತೆ ಆದದ್ದು.

2 ಸಾಮಾಜಿಕ ನ್ಯಾಯದ ಹೆಸರಿನಲ್ಲಿ ಕಡಮೆ ಬಡ್ಡಿಯಲ್ಲಿ ಆದ್ಯತಾ ವಲಯಗಳಿಗೆ ಸಾಲ,

3 ಸಾಲಮೇಳ, ಸಾಲಮನ್ನಾಗಳಿಂದ ಆದ ನಷ್ಟ,

4 ಕಾನೂನಿನ ಅಡಿಯಲ್ಲಿ ಅನೇಕ ವರ್ಷಗಳಿಂದ ತೀರ್ಮಾನವಾಗದೆ ನರಳುತ್ತಿರುವ, ವಸೂಲಾಗದ ಬಾಕಿ,

5 ದಿನೇದಿನೇ ಹೆಚ್ಚುತ್ತಿರುವ ಅಸ್ವಸ್ಥ ಉದ್ಯಮಗಳಿಂದ ವಾಪಸು ಪಡೆಯಲಾಗದ ಋಣಗಳು,

6 ಏರುತ್ತಿರುವ ಸಿಬ್ಬಂದಿ ಹಾಗೂ ಇತರ ವೆಚ್ಚಗಳು,

ಇದನ್ನೆಲ್ಲಾ ಸರಿತೂಗಿಸಬೇಕಾದ್ದರಿಂದ ಬ್ಯಾಂಕುಗಳು ಇಲ್ಲದ ಆದಾಯಗಳನ್ನು ಗುರುತಿಸಿ ಲಾಭ ಘೋಷಿಸಿದ್ದು.

ಈ ಪರಿಸ್ಥಿತಿಯನ್ನು ಕೊನೆಗೊಳಿಸಲು ಸರ್ಕಾರ ನರಸಿಂಹಂ ಸಮಿತಿಯನ್ನು ನೇಮಿಸಿ, ಅದು ಕೊಟ್ಟ ಸಲಹೆಗಳಲ್ಲಿ ಕೆಲವನ್ನು ರಿಸರ್ವ್ ಬ್ಯಾಂಕಿನ ಮೂಲಕ ಎಲ್ಲಾ ಬ್ಯಾಂಕುಗಳಲ್ಲಿ ಅನುಷ್ಠಾನಕ್ಕೆ ತರಲು ಯತ್ನಿಸಿರುವುದು ಈಗಾಗಲೇ ಹಳೆಯ ವಿಷಯ.

ನರಸಿಂಹಂ ಸಮಿತಿ ಹಳೆಯ ಸಮಿತಿಗಳಾದ ಘೋಷ್ ಸಮಿತಿ ಹಾಗೂ ಪೆಂಡಾರಕರ್ ಸಮಿತಿಗಳ ಮುಂದುವರಿಕೆ.

ಘೋಷ್ ಸಮಿತಿಯ ಪ್ರಕಾರ "ಹಾಕಿದ ಬಡ್ಡಿ/ಯಾ ಇತರ ಖರ್ಚುಗಳ ಮರುಪಾವತಿ ಬಗ್ಗೆ ಸಂಶಯವಿಲ್ಲದೆ ಯಾವುದೇ ಅನುಮಾನವಿಲ್ಲದೆ ಇದ್ದರೆ ಅದನ್ನು ಆದಾಯವೆಂದು ಪರಿಗಣಿಸಬಹುದು."

ಪೆಂಡಾರ್‌ಕರ್ ಸಮಿತಿ ಬ್ಯಾಂಕುಗಳಲ್ಲಿ ಒಂದು "ಆರೋಗ್ಯ ಸಂಹಿತೆಯ ವ್ಯವಸ್ಥೆಯನ್ನು" ಅನುಷ್ಠಾನಕ್ಕೆ ತರಲು ಕಾರಣವಾಯಿತು.

ಎಲ್ಲಾ ಸಾಲಗಳನ್ನು 8 ವರ್ಗಗಳಾಗಿ ವಿಂಗಡಿಸಿ. ಅಂದರೆ—

1 ತೃಪ್ತಿದಾಯಕ,

2 ಅನಿಯತ,

3 ಅಸ್ವಸ್ಥ ಆದರೂ ಜೀವಂತಿಕೆಯುದು,

4 ಅಸ್ವಸ್ಥ ಆದರೆ ನಿರ್ಜೀವಂತಿಕೆಯುದು,

5 ವಾಪಸ್ಸು ಕರೆದ ಸಾಲಗಳು,

6 ದಾವಾ ಹಾಕಿದ ಸಾಲಗಳು,

7 ಡಿಕ್ರಿ ಆದ ಸಾಲಗಳು,

8 ಕರಡು/ಅನುಮಾನ ಋಣ.

ಇದರಲ್ಲಿ 5ರಿಂದ 8ರ ವರೆಗಿನ ಋಣಗಳ ಆದಾಯವನ್ನು ಪರಿಗಣಿಸುವಂತಿಲ್ಲ.

ಇದಕ್ಕೆ ಇನ್ನೂ ಒಂದು ಕಾರಣವೆಂದರೆ ತೆರಿಗೆಯ ನಿಯಮ. ಯಾವುದೇ ಬಡ್ಡಿಯನ್ನು ಖಾತೆಗೆ ಖರ್ಚು ಹಾಕಿದಲ್ಲಿ ಅದನ್ನು ಆದಾಯ ಎಂದು ಪರಿಗಣಿಸಿ ಅದಕ್ಕೆ ತೆರಿಗೆ ಕೊಡಲೇಬೇಕು ಎಂಬ ನಿಯಮ. ಆದ್ದರಿಂದ ಬ್ಯಾಂಕುಗಳು 5ರಿಂದ 8ರ ವರೆಗೆ ಬಡ್ಡಿಯನ್ನು ಹಾಕುವುದಿಲ್ಲ.

ನರಸಿಂಹಂ ಸಮಿತಿ 8 ವರ್ಗಗಳನ್ನು ನಾಲ್ಕು ವರ್ಗಗಳಾಗಿ ವಿಂಗಡಿಸಿ, ಆದಾಯ ಗುರುತಿಸಲು ಹಲವು ಕ್ರಮಗಳನ್ನು ಸೂಚಿಸಿತು.

ಸರ್ಕಾರ ತಾ. 14-8-91ರಂದು ನರಸಿಂಹಂ ಸಮಿತಿಯನ್ನು ಹಣಕಾಸು ವ್ಯವಹಾರದ ವ್ಯವಸ್ಥೆಯ ರೂಪು ರೇಷೆ ಹಾಗೂ ಕಾರ್ಯವಿಧಾನಗಳನ್ನು ಪರಿಶೀಲಿಸಿ ವರದಿ ಒಪ್ಪಿಸಲು ನೇಮಿಸಿತು.

ಸಮಿತಿ ತನ್ನ ವರದಿಯನ್ನು 16-11-91ರಂದು ಸರ್ಕಾರಕ್ಕೆ ಒಪ್ಪಿಸಿತು.

ಸರ್ಕಾರ ಇದರ ಕೆಲವೊಂದು ಸಲಹೆಗಳ ವಿನಾ ಉಳಿದವಕ್ಕೆ ಒಪ್ಪಿಗೆ ನೀಡಿ ರಿಸರ್ವ್ ಬ್ಯಾಂಕಿನ ಮೂಲಕ ಎಲ್ಲ ಬ್ಯಾಂಕುಗಳಲ್ಲಿ ಚಲಾವಣೆಗೆ ತಂದಿತು.

**ನರಸಿಂಹಂ ಸಮಿತಿ ವರದಿಯ ಮುಖ್ಯಾಂಶಗಳು**

ಸಮಿತಿ ಈ ವಿಷಯ ಕುರಿತಂತೆ ಮೂರು ಪ್ರಮುಖ ಸಲಹೆಗಳನ್ನು ಮಾಡಿತು :

1 ಬಂಡವಾಳ ಪರ್ಯಾಪ್ತತೆ,
2 ಲೆಕ್ಕ ದಾಖಲೆ ನೀತಿ,
3 ಆದಾಯ ಮಾನ್ಯತೆ ಹಾಗೂ ಮೀಸಲಿಡುವಿಕೆ.

ಇವುಗಳಲ್ಲಿ ಮೂರನೆಯದಾದ ಆದಾಯ ಮಾನ್ಯತೆ, ಆಸ್ತಿಗಳ ವರ್ಗೀಕರಣ ಹಾಗೂ ಮೀಸಲು ನೀತಿಯನ್ನು ಕುರಿತಂತೆ ಈ ಲೇಖನದಲ್ಲಿ ವಿವೇಚಿಸಲಾಗಿದೆ.

ಮೊದಲು ಸಮಿತಿಯ ಪ್ರಕಾರ ಆದಾಯ ಎಂದರೆ

ಬಾಕಿ ಬರಬೇಕಾದ ಯಾವುದೇ ಮೊಬಲಗು ಬರಬೇಕಾದ ದಿನದಲ್ಲಿ ಪಾವತಿಯಾದರೆ ಮಾತ್ರ ಅದನ್ನು ಆದಾಯ ಎಂದು ಗುರುತಿಸಬೇಕು.

ಇದುವರೆಗೆ ಆರೋಗ್ಯ ಸಂಹಿತೆಯ 1ರಿಂದ 4ರ ವರೆಗಿನ ಸಾಲಗಳ ಮೇಲೆ ಬಡ್ಡಿ ಬರಲಿ ಬಿಡಲಿ ಅದನ್ನು ಖಾತೆಗಳಲ್ಲಿ ಆದಾಯದ ಲೆಕ್ಕಕ್ಕೆ ಸೇರಿಸಿ ಲಾಭವನ್ನು ಬ್ಯಾಂಕುಗಳು ಘೋಷಿಸುತ್ತಿದ್ದವು. ಆದರೆ ಯಾವುದೇ ಬಡ್ಡಿ ಅಥವಾ ಹಾಕಿದ ಖರ್ಚು ಭಾರತೀಯ ಬ್ಯಾಂಕುಗಳ ಸಂಪ್ರದಾಯದಂತೆ ಹಾಕಿದ 30 ದಿನಗಳೊಳಗೆ ಪಾವತಿಯಾಗದೆ ಇದ್ದಲ್ಲಿ ಅದನ್ನು "ಗಡವು ಮೀರಿದ" ಬಾಕಿ ಎಂದು ಪರಿಗಣಿಸಬೇಕು.

ಇದನ್ನು ಮತ್ತಷ್ಟು ವಿವರಿಸಬೇಕೆಂದರೆ, ಬ್ಯಾಂಕಿನ ಎಲ್ಲಾ ಋಣಗಳನ್ನು ಕ್ರಿಯಾತ್ಮಕ ಅಥವಾ ನಿಷ್ಕ್ರಿಯಾತ್ಮಕ ಎಂದು ಗುರುತಿಸಬೇಕಾಗುತ್ತದೆ. ಆದ್ದರಿಂದ ಎಲ್ಲಾ ಸಾಲಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ :

1 ಶಿಷ್ಟ ಋಣ,
2 ಕಡಮೆ ಗುಣಮಟ್ಟದ ಋಣ,
3 ಅನುಮಾನ ಋಣ,
4 ನಷ್ಟ.

ಶಿಷ್ಟ ಋಣ ಅಥವಾ ಕ್ರಿಯಾತ್ಮಕ ಸಾಲದಲ್ಲಿ ಯಾವುದೇ ಅಪಾಯವಿಲ್ಲ ಹಾಗೂ ಬಾಕಿಯ ಪಾವತಿಯ ಬಗ್ಗೆ ಸಂಶಯವಿಲ್ಲ, ಆದ್ದರಿಂದ ಇದನ್ನು ಕ್ರಿಯಾತ್ಮಕ ಸಾಲ ಎಂದು ಪರಿಗಣಿಸಲಾಗುತ್ತದೆ.

**ನಿಷ್ಕ್ರಿಯಾತ್ಮಕ ಸಾಲ**

ಇದನ್ನು ಗುರುತಿಸಬೇಕಾದರೆ ಮುಖ್ಯವಾಗಿ ಬಡ್ಡಿ ಪಾವತಿಯನ್ನು ಗಣನೆಗೆ ತೆಗೆದುಕೊಳ್ಳಬೇಕು.

ಅವಧಿ ಸಾಲ, ನಗದು ಸಾಲ/ಮೀರೆಳತ/ಹುಂಡಿ ಪ್ರತಿಯೊಂದಕ್ಕೂ ಅವುಗಳ ನಿಷ್ಕ್ರಿಯಾತ್ಮಕತೆಯನ್ನು ಗುರುತಿಸಲು ಒಂದೊಂದು ಸೂತ್ರ.

**I ಅವಧಿ ಸಾಲ**

1 31-3-93ಕ್ಕೆ ಅಂತ್ಯವಾದ ವರ್ಷಕ್ಕೆ ಬಡ್ಡಿಯ ಬಾಕಿ 4 ತ್ರೈಮಾಸಿಕ ಅವಧಿಗಳದ್ದಾಗಿದ್ದರೆ ;
2 31-3-94ಕ್ಕೆ ಅಂತ್ಯವಾದ ವರ್ಷಕ್ಕೆ ಬಡ್ಡಿಯ ಬಾಕಿ 3 ತ್ರೈಮಾಸಿಕ ಅವಧಿಗಳದಾಗಿದ್ದರೆ ;
3 31-3-95ಕ್ಕೆ ಅಂತ್ಯವಾದ ವರ್ಷಕ್ಕೆ ಬಡ್ಡಿಯ ಬಾಕಿ 2 ತ್ರೈಮಾಸಿಕ ಅವಧಿಗಳದಾಗಿದ್ದರೆ ;

II ಅಸಲಿನ ಕಂತು ಬಾಕಿ ಒಂದು ವರ್ಷಕ್ಕೆ ಮೀರಿ ಆದರೆ ಎರಡು ವರ್ಷ ಮೀರದ್ದು;

III ಅಸಲಿನ ಕಂತಿನ ಬಾಕಿ ಎರಡು ವರ್ಷಕ್ಕೆ ಮೀರಿದ್ದು;

ಇದನ್ನು ನಿಷ್ಕ್ರಿಯಾತ್ಮಕ ಸಾಲ ಎಂದು ಗುರುತಿಸಬಹುದು.

(ವಿವರಕ್ಕೆ 11ನೆ ಪುಟಕ್ಕೆ)

**ನಗದು ಸಾಲ/ಮೀರೆಳೆತ ಸಾಲ**

ಇವುಗಳನ್ನು ನಿಷ್ಕ್ರಿಯಾತ್ಮಕ ಸಾಲ ಎಂದು ಪರಿಗಣಿಸಬೇಕಾದರೆ

1 ನಾಲ್ಕು ತ್ರೈಮಾಸಿಕಗಳಲ್ಲೂ ಇದು "ನಿಯಮಬದ್ಧ"ವಾಗಿಲ್ಲದೆ ಇರಬೇಕು.

ಇಲ್ಲಿ "ನಿಯಮಬದ್ಧವಲ್ಲದ" ಎಂದು ಗುರುತಿಸಬೇಕಾದರೆ

1 ಅದು ಮಂಜೂರಾತಿಯಾದ ಸಾಲದ ಮಿತಿಯನ್ನು ಆರು ತಿಂಗಳೂ ಮೀರಿದ್ದಲ್ಲಿ,
2 ಅಥವಾ ಎಳೆತದ ಅಧಿಕಾರ ಮಿತಿಯನ್ನು ಆರು ತಿಂಗಳೂ ಮೀರಿದ್ದಲ್ಲಿ ಹಾಗೂ

ಮಂಜೂರಾತಿಯಾದ ಸಾಲದ ಮಿತಿಯೊಳಗೆ ಇದ್ದರೂ

1 ಆರು ತಿಂಗಳು ಯಾವುದೇ ಪಾವತಿ ಇಲ್ಲದೆ ಇದ್ದಲ್ಲಿ,
2 ಪಾವತಿ ಮಾಡಿದ ಮೊತ್ತ ಹಾಕಿದ ಬಡ್ಡಿಯ ಮೊತ್ತಕ್ಕಿಂತ ಕಡಿಮೆ ಇದ್ದಲ್ಲಿ

## ನಿಷ್ಕ್ರಿಯತೆಯನ್ನು ಗುರುತಿಸುವ ಬಗೆ

ನಗದು ಸಾಲ/ಮೀರೆಳೆತದ
ಖಾತೆಗಳು

4 ತ್ರೈಮಾಸಿಕದಲ್ಲೂ
ಶಿಲ್ಕು ಪರಿಮಿತಿಯನ್ನು ಮೀರಿದ್ದಲ್ಲಿ
ಅಥವಾ
ಮೀರೆಳೆತದ ಅಧಿಕಾರವನ್ನು ಮೀರಿದ್ದಲ್ಲಿ

ಶಿಲ್ಕು ಪರಿಮಿತಿಯೊಳಗೆ ಇದ್ದಲ್ಲಿ
ಅಥವಾ
ಮೀರೆಳೆತದ ಅಧಿಕಾರವನ್ನು
ಮೀರದೆ ಇದ್ದಲ್ಲಿ

ಆರು ತಿಂಗಳಲ್ಲಿ ಯಾವುದೇ
ಪಾವತಿ ಇಲ್ಲ

ಆರು ತಿಂಗಳಿಗೆ
ಪಾವತಿ

ಪಾವತಿಯಾದ ಹಣ
ಆರು ತಿಂಗಳ ಬಡ್ಡಿಗೆ
ಸಾಕಾಗದೆ ಇದ್ದಲ್ಲಿ

ನಿಯಮಬದ್ಧವಲ್ಲದ
ಸಗಟು ಸಾಲ/ಮೀರೆಳೆತ

(ಹಿಂದಿನ ಪುಟದಿಂದ)

ಇದನ್ನು "ನಿಯಮಬದ್ಧವಲ್ಲದ" ಸಾಲ ಎಂದು ಪರಿಗಣಿಸಬೇಕು.

ಇದರ ಒಟ್ಟಾರೆ ಅರ್ಥ, ಖಾತೆ ತನ್ನ ಒಂದು ವರ್ಷದ ವಹಿವಾಟಿನಲ್ಲಿ ಬಡ್ಡಿಯನ್ನು ಅರಗಿಸಿಕೊಳ್ಳಬೇಕು.

**ಹುಂಡಿಗಳು**

ಮುರಿಸಿದ/ಕ್ರಯಿಸಿದ ಯಾವುದೇ ಹುಂಡಿ

1993 ಮಾರ್ಚಿ 31ರಲ್ಲಿ ನಾಲ್ಕು ತ್ರೈಮಾಸಿಕದಲ್ಲೂ
1994 " 31ರಲ್ಲಿ ಮೂರು "
1995 " " ಎರಡು "

ಪಾವತಿಯಾಗದೆ ಬಾಕಿ ಉಳಿದಲ್ಲಿ ಇದನ್ನು ನಿಷ್ಕ್ರಿಯಾತ್ಮಕ ಋಣ/ಸಾಲ ಎಂದು ಪರಿಗಣಿಸಬೇಕು.

ಈ ನಿಷ್ಕ್ರಿಯಾತ್ಮಕತೆಯನ್ನು ಆಧಾರವಾಗಿಟ್ಟುಕೊಂಡು ಅದರ ಸಾಲವಾರು ಗಣತಿಯ ಮೇಲೆ ಸಾಲಗಳನ್ನು

1 ಕಡಮೆ ಗುಣಮಟ್ಟದ್ದು,
2 ಅನುಮಾನ,
3 ನಷ್ಟದ್ದು

ಎಂದು ಗುರುತಿಸಬೇಕು.

ನಿಷ್ಕ್ರಿಯತೆ ಎರಡು ವರ್ಷಗಳವರೆಗೆ ಮುಂದುವರಿದಲ್ಲಿ ಅದನ್ನು "ಕಳಪೆ ಋಣ"ವೆಂದು,

ನಿಷ್ಕ್ರಿಯತೆ ಎರಡು ವರ್ಷಗಳ ಮೇಲ್ಪಟ್ಟಂತೆ ಮುಂದುವರಿದಲ್ಲಿ ಅದನ್ನು "ಅನುಮಾನ ಋಣ"ವೆಂದು,

ಬ್ಯಾಂಕಿನ ಆಂತರಿಕ/ಹೊರ ಲೆಕ್ಕಪರಿಶೋಧಕರು ಯಾವುದೇ ಋಣ "ನಷ್ಟದ ಋಣ"ವೆಂದು ಗುರುತಿಸಿದಲ್ಲಿ ಅದನ್ನು ನಷ್ಟದ

ಋಣವೆಂದು ಪರಿಗಣಿಸಬೇಕು. ಬ್ಯಾಂಕು ಈ ಮುಂಚೆ ಯಾವುದೇ ಋಣವನ್ನು ಅನುಮಾನ ಅಥವಾ ನಷ್ಟದ ಋಣ ಎಂದು ಗುರುತಿಸಿದಲ್ಲಿ ಅದೂ ಹಾಗೆ ಮುಂದುವರೆಯಬೇಕು.

ಅಸ್ವಸ್ಥ ಉದ್ದಿಮೆಗಳಿಗೆ ಶುಶ್ರೂಷೆ ಕಾರ್ಯಕ್ರಮದಡಿಯಲ್ಲಿ ಸವಲತ್ತುಗಳನ್ನು ಕೊಟ್ಟಿದ್ದರೂ (ಬಡ್ಡಿ/ಕಂತು ಮರುಪಾವತಿಯಲ್ಲಿ) ಮರುಪಾವತಿಯನ್ನು ಎರಡು ವರ್ಷಗಳವರೆಗೆ ಸರಿಯಾಗಿ ಮಾಡಿದಲ್ಲಿ ಮಾತ್ರ ಅದನ್ನು ಬಡ್ಡಿಗೆ ಪರಿಗಣಿಸಬಹುದು.

ಇಷ್ಟಕ್ಕೆ ಮುಗಿದಿದ್ದರೆ ಬ್ಯಾಂಕು ಸಂತೋಷಪಡಬಹುದಿತ್ತು. ಆದರೆ ಈ ಋಣಗಳಿಗೆ ಪ್ರತಿವರ್ಷ ಮೀಸಲು ತೆಗೆದಿಡಬೇಕು ಎಂದದ್ದರಿಂದಲೆ ತೊಂದರೆ.

1 ಕಡಮೆ ಗುಣಮಟ್ಟದ ಋಣ ಶೇ. 10ರಷ್ಟು, ಬಾಕಿ ಉಳಿದ

2 ಅನುಮಾನ ಋಣದ ಆಧಾರವಿಲ್ಲದ ಭಾಗಕ್ಕೆ ಶೇ. 100ರಷ್ಟು, ಆಧಾರವಿರುವ ಭಾಗಕ್ಕೆ

1 ವರ್ಷಕ್ಕೆ 20%

2 ವರ್ಷಕ್ಕೆ 30%

3 ವರ್ಷಕ್ಕೆ 50% ತೆಗೆದಿರಿಸಬೇಕು.

ಮೀಸಲು ತೆಗೆಯುವಾಗ ಆಧಾರದಿಂದ ಬರುವ ಹಣ. ಹಾಗೂ ಉದರಿ ಖಾಸಗಿ ಸಂಸ್ಥೆಗಳಿಂದ ಬರುವ ಹಣವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು.

### ಆದಾಯ ಗುರುತಿಸುವ ಹಾಗೂ ಆಸ್ತಿ ವಿಂಗಡಣೆ ನಕಾಶೆ ಮತ್ತು ಮೀಸಲಿರುವ ವಾಸ್ತವ ನಕಾಶೆ




ಉದರಿ ಖಾತರಿ ಸಂಸ್ಥೆಯಿಂದ ಬರಬಹುದಾದ ಹಾಗೂ ಆಧಾರದಿಂದ ಬರುವ ಹಣವನ್ನು ಕಳೆದು ಮೀಸಲಿಡುವುದು.

ನಷ್ಟದ ಋಣ ಶೇ. 100ರಷ್ಟು.

25.000 ರೂಗಳ ಒಳಗಿರುವ ಸಾಲಗಳಿಗೆ ಶೇ. 2.5ರಂತೆ.

ಇವನ್ನು ಅನುಷ್ಠಾನ ಮಾಡುವಾಗ ಅನೇಕ ಸಂಶಯಗಳು ಕಾಡಿ ಇಂದಿಗೂ ಪೂರ್ತಿಯಾಗಿ ಪರಿಹಾರವಾಗಿಲ್ಲ. ಬಹುಶಃ ಮುಂದಿನ ವರ್ಷದಲ್ಲಿ ಎಲ್ಲಾ ಸರಿಯಾಗಿ ಬ್ಯಾಂಕ್ 'ಲೆಕ್ಕಪಟ್ಟಿ' ನಿಜವಾದ ಬಂಡವಾಳವನ್ನು ಪ್ರತಿಬಿಂಬಿಸಬಹುದು.

ಹಳೆಯ ಲೆಕ್ಕದಲ್ಲೆ ಮೀಸಲು ತೆಗೆದಿಟ್ಟದಲ್ಲಿ ಕೇವಲ ಆರು ಬ್ಯಾಂಕುಗಳು ಮಾತ್ರ ಲಾಭದಾಯಕವಾಗಿ, ಮಿಕ್ಕೆಲ್ಲವೂ ನಷ್ಟವನ್ನು ಅನುಭವಿಸುತ್ತಿದ್ದವು.

ಈ ಸೂತ್ರವನ್ನು ಅನ್ವಯಿಸಿದಾಗ ಬ್ಯಾಂಕುಗಳು ಉತ್ತಮಗೊಳ್ಳುತ್ತವೆ ಎಂಬ ನಂಬಿಕೆ ಸುಳ್ಳು. ಇದು ಉತ್ತಮಗೊಳ್ಳುವುದು ಈ ಮುಂದಿನ ಅಂಶಗಳಿಗೂ ಸರ್ಕಾರ ಮನಸ್ಸು ಕೊಟ್ಟರೆ ಮಾತ್ರ :

1 ಋಣಗಳನ್ನು ವಾಪಸ್ಸು ಪಡೆಯಲು ಬೇಕಾದ ವಾತಾವರಣ ಅಂದರೆ ಕಾನೂನಿನ ಸಹಾಯ (ಶೀಘ್ರ ಇತ್ಯರ್ಥಕ್ಕೆ).

2 ಸರ್ಕಾರ ಬ್ಯಾಂಕಿನಿಂದ ಪಡೆದ ಸಾಲಕ್ಕೆ ಮಾರುಕಟ್ಟೆ ಬಡ್ಡಿ.

3 ಸರ್ಕಾರಿ ಆದೇಶದ ಮೇರೆಗೆ ವಿನಿಯೋಜಿಸಿದ ಹಣಗಳಿಗೆ ಮಾರುಕಟ್ಟೆ ಬಡ್ಡಿ.

4 ಬ್ಯಾಂಕುಗಳ ಆಡಳಿತದಲ್ಲಿ ರಾಜಕೀಯ ಹಸ್ತಕ್ಷೇಪದ ತಡೆ

5 ಅನುದಾನ/ಮೀಸಲಿನಲ್ಲಿ ಕಡಿತ.

6 ಬ್ಯಾಂಕಿನ ವ್ಯವಹಾರಗಳನ್ನು ನಿರ್ದೇಶಿಸಲು ಒಂದೇ ಒಂದು ಸ್ವಾಯತ್ತ ಸಂಸ್ಥೆ. (18ನೇ ಪುಟ)

# ನಿಷ್ಕ್ರಿಯ ಆಸ್ತಿಗಳ ನಿರ್ವಹಣೆ

**ಕೆ. ಎನ್. ಗುರುದತ್ತ ಮತ್ತು ಬಿ. ಎನ್. ಎನ್. ಮೂರ್ತಿ**

ಭಾರತೀಯ ಸ್ಟೇಟ್ ಬ್ಯಾಂಕ್, ಎನ್. ಟಿ. ಪೇಟೆ ಶಾಖೆ, ಚಾಮರಾಜಪೇಟೆ, ಬೆಂಗಳೂರು

ಆದಾಯ ತಾರದ ಆಸ್ತಿಗಳು ಬ್ಯಾಂಕುಗಳ ದೊಡ್ಡ ತಲೆನೋವು. ಅವು ಕೂಡ ಲಾಭ ತಂದು ಕೊಡುವಂತೆ ಮಾಡಲು, ಅವುಗಳ ಬಂಜೆತನವನ್ನು ತೊಡೆದುಹಾಕಲು ಕಾನೂನಿನ ಚೌಕಟ್ಟಿನೊಳಗಿನ ಮತ್ತು ಅದರಿಂದಾಚೆಗಿನ ಉಪಾಯಗಳು.

**ಬ್ಯಾಂಕಿನಲ್ಲಿ** ಯಾವುದೇ ಆದಾಯ ನೀಡದೆ ಇರುವಂಥ ಸಾಲಕ್ಕೆ ನಿಷ್ಕ್ರಿಯ ಆಸ್ತಿ ಎಂದು ಹೇಳಬಹುದು. ಈ ನಿಷ್ಕ್ರಿಯ ಆಸ್ತಿ ಒಂದು ಬ್ಯಾಂಕಿನ ವ್ಯವಸ್ಥೆಯಲ್ಲಿ, ಸಂಸ್ಥೆಯ ಆಗುಹೋಗುಗಳಲ್ಲಿ ಬಹಳ ಮುಖ್ಯವಾದದ್ದು. ಆದ್ದರಿಂದ ಈ ನಿಷ್ಕ್ರಿಯ ಆಸ್ತಿಗಳ ನಿರ್ವಹಣೆ ಹೆಚ್ಚು ಫಲಕಾರಿಯಾದಷ್ಟೂ, ಬ್ಯಾಂಕುಗಳಿಗೆ ಅನುಕೂಲಕರವಾಗಿ ಪರಿಣಮಿಸುತ್ತದೆ.

ನಿಷ್ಕ್ರಿಯ ಆಸ್ತಿಗಳ ಬಗ್ಗೆ ಹೇಳುವ ಮುನ್ನ ಇದರ ಪರಿಣಾಮ ಹೇಗೆ ನಮ್ಮ ಬ್ಯಾಂಕ್‌ಗಳ ಸ್ಥಿತಿ ವಿವರಣ ಪಟ್ಟಿಯ ಮೇಲೆ ಆಗುತ್ತದೆ ಎಂಬುದರ ಬಗ್ಗೆ ಸ್ಥೂಲವಾಗಿ ಗಮನ ಹರಿಸೋಣ:

ಒಂದು ಸಂಸ್ಥೆಯ ಆರ್ಥಿಕ ಸ್ಥಿತಿಯನ್ನು ನಿಗದಿಪಡಿಸಿದ ದಿನದಂದು ತಿಳಿಸುವ ದಾಖಲೆಗೆ ಸ್ಥಿತಿ ವಿವರಣ ಪಟ್ಟಿ (Balance Sheet) ಎಂದು ಹೇಳಬಹುದು. ಈ ದಾಖಲೆ ಸಂಸ್ಥೆಯ ವಾರ್ಷಿಕ ವಹಿವಾಟು, ವ್ಯಾಪಾರ ಹಾಗೂ ಲಾಭ ನಷ್ಟಗಳನ್ನು ಕ್ರೋಡೀಕರಿಸುತ್ತದೆ. ಈ ದಾಖಲೆಗಳು ಸಂಬಂಧಪಟ್ಟ ಷೇರುದಾರರಿಗೆ, ವ್ಯವಸ್ಥಾಪಕರಿಗೆ, ಸಾಲಗಾರರಿಗೆ ಮತ್ತು ಇನ್ನಿತರ ಸಂಸ್ಥೆಯ ಆಗುಹೋಗುಗಳಲ್ಲಿ ಆಸಕ್ತಿಯುಳ್ಳವರಿಗೆ ಬಹು ಮುಖ್ಯವಾದದ್ದು.

ಕೆಲವು ಸಲ ಈ ದಾಖಲೆಯು ಸಂಸ್ಥೆಯ ವ್ಯವಹಾರವನ್ನು ಪ್ರಕಟಪಡಿಸುವುದಕ್ಕಿಂತ ಹೆಚ್ಚಿಗೆ ಗೋಪ್ಯವಾಗಿಡುತ್ತದೆ ಎಂಬ ಸಾಮಾನ್ಯವಾದ ಅಪವಾದ ಕೇಳಿಬರುತ್ತದೆ. ಗೋಪ್ಯವಾಗಿಡತಕ್ಕಂಥ ಈ ತರಹದ ಅಂಕಿ ಅಂಶಗಳಿಗೆ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಈ ಕಾನೂನಿನ ರಕ್ಷಣೆ ಸಹ ಇದ್ದಿತು. (Preservation of Secret Reserves). ಈ ಕಾನೂನಿನ ತೆರೆಯಲ್ಲಿ ಬ್ಯಾಂಕುಗಳು ತಮ್ಮ ಕರಡು ಮತ್ತು ಅನುಮಾನ ಋಣ (Bad and doubtful debts)ಗಳನ್ನು ಉಪಬಂಧ ರೂಪದಲ್ಲಿ (Provisions) ಹೆಚ್ಚು ಕಡಿಮೆ ಮಾಡುವ ಪರಿಪಾಟ ಇತ್ತೀಚಿನವರೆಗೂ ರೂಢಿಯಲ್ಲಿ ಇದ್ದಿತು. ಜನರ ನಂಬಿಕೆ ಉಳಿಸಿಕೊಳ್ಳುವ ಸಲುವಾಗಿ ಕರಡು ಋಣವನ್ನು ತಮ್ಮ ಅಂತಿಮ ಲೆಕ್ಕಗಳಲ್ಲಿ (Final accounts) ತೋರಿಸದೆ, ಬ್ಯಾಂಕ್‌ಗಳಲ್ಲಿ ಬರುವ ಬಡ್ಡಿಯಿಂದ ವಜಾ ಮಾಡಿ ನಿವ್ವಳ ಮೊಬಲಗು (Net amount) ತೋರಿಸುವ ಪದ್ಧತಿ ಸಹ ರೂಢಿಯಲ್ಲಿತ್ತು. ಸಾಲಗಳ ಮೇಲೆ ಕೂಡಿಬರುವ ಬಡ್ಡಿಯನ್ನು (Account) ಸಾಲದ ಖಾತೆ ಯಾವ ಪರಿಸ್ಥಿತಿಯಲ್ಲಿದ್ದರೂ ಆದಾಯವೆಂದು ಪರಿಗಣಿಸಿ, ತಮ್ಮ ಲಾಭಾಂಶವನ್ನು ಹೆಚ್ಚು ಮಾಡಿಕೊಳ್ಳುವ ಸಂಭವ ಸಹ ಈ ಪದ್ಧತಿಯಲ್ಲಿ ಇದೆ. ಈ ತರಹದ ಪರಿಣಾಮಗಳಿಂದ ಬ್ಯಾಂಕಿಂಗ್ ಸಂಸ್ಥೆಗಳ ನಿಜವಾದ ಆದಾಯ, ಮತ್ತು ಅವುಗಳ ಖಚಿತವಾದ ಆರ್ಥಿಕ ಪರಿಸ್ಥಿತಿ ನಿಖರವಾಗಿ ತಿಳಿಯುತ್ತಿರಲಿಲ್ಲ. ಬ್ಯಾಂಕಿಂಗ್ ಸಂಸ್ಥೆಗಳಿಗೆ ದೊರೆತಿರುವ ಈ ಕಾನೂನಿನ ರಕ್ಷಣೆಯನ್ನು ತೊಡೆದುಹಾಕಲು ಅನೇಕ ಬಾರಿ ವಿವಿಧ ಕ್ಷೇತ್ರಗಳಲ್ಲಿ, ಸಂಸತ್ತಿನವರೆಗೂ ಸಹ, ತೀವ್ರವಾದ ಚರ್ಚೆ ನಡೆದಿದೆ. ಈ ನಿಟ್ಟಿನಲ್ಲಿ ಭಾರತೀಯ ರಿಸರ್ವ್ ಬ್ಯಾಂಕ್ ಹಾಗೂ ಕೇಂದ್ರ ಸರ್ಕಾರ ಆಗಿರುವ ತಪ್ಪುಗಳನ್ನು ಸರಿಪಡಿಸಲು ವಿವಿಧ ಸಮಿತಿಗಳ ಮೂಲಕ ಅನೇಕ ಸಲಹೆಗಳನ್ನು ಕಾಲಕಾಲಕ್ಕೆ ನೀಡುತ್ತಾ ಬಂದಿದೆ, ಆರ್ಥಿಕ ಸಂಸ್ಥೆಗಳನ್ನು ಪರಿಷ್ಕರಿಸಲು ಕೇಂದ್ರ ಸರ್ಕಾರ 1991ರಲ್ಲಿ ರಚಿಸಿದ ನರಸಿಂಹಂ ಸಮಿತಿ ಇತ್ತೀಚಿನದು ಹಾಗೂ ಬಹಳ ಪರಿಣಾಮಕಾರಿಯಾದದ್ದು.

ಈ ಸಮಿತಿಯ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು, ಆದಾಯ ಗ್ರಹಣ (Income recogintion), ಸ್ವತ್ತು ವರ್ಗೀಕರಣ (Asset classfication), ಉಪಬಂಧ, ನಿಷ್ಕ್ರಿಯ ಆಸ್ತಿಗಳ ವಿಂಗಡಣೆ ಮಾಡುವ ಬಗ್ಗೆ ಭಾರತೀಯ ರಿಸರ್ವ್ ಬ್ಯಾಂಕ್ ಎಲ್ಲಾ ಬ್ಯಾಂಕ್‌ಗಳಿಗೆ ಆದೇಶ ನೀಡಿದೆ. ಈಗ ನಾವು ಕೇವಲ ನಿಷ್ಕ್ರಿಯ ಆಸ್ತಿಗಳ ಬಗ್ಗೆ ಗಮನ ಹರಿಸೋಣ. ಆಸ್ತಿಗಳನ್ನು ನಾಲ್ಕು ಪಂಗಡಗಳಾಗಿ ವಿಂಗಡಿಸಬಹುದು:

1 ಶಿಷ್ಟ ಆಸ್ತಿ,
2 ಕಡಮೆ ಗುಣಮಟ್ಟದ ಆಸ್ತಿ,
3 ಅನುಮಾನ ಆಸ್ತಿ.
4 ನಷ್ಟ ಆಸ್ತಿ.

ಇತ್ತೀಚಿನ ವರ್ಷಗಳಲ್ಲಿ ಈ ನಿಷ್ಕ್ರಿಯ ಆಸ್ತಿಗಳ ಭಾಗ ಬ್ಯಾಂಕಿನ ಒಟ್ಟು ಸಾಲದ ಮೊತ್ತದಲ್ಲಿ ಗಣನೀಯವಾಗಿ ಹೆಚ್ಚುತ್ತಾ ಬಂದು ಆತಂಕಕಾರಿ ಪರಿಸ್ಥಿತಿಯನ್ನು ಮುಟ್ಟಿದೆ. ದೊರೆತಿರುವ ಅಂಕಿ–ಅಂಶಗಳ ಪ್ರಕಾರ ಜಿಗುಟುಸಾಲದ (Sticky Loan) ಶೇ. 30–35ರಷ್ಟು ಪಾಲು ನಿಷ್ಕ್ರಿಯ ಆಸ್ತಿಗಳದು ಎಂದು ಊಹಿಸಲಾಗಿದೆ. ಹೆಚ್ಚುತ್ತಾ ಇರುವ ಈ ನಿಷ್ಕ್ರಿಯ ಆಸ್ತಿಯಿಂದ ಬ್ಯಾಂಕಿನ ಲಾಭಪ್ರಭತೆ (Profitability) ಹಂತಹಂತವಾಗಿ ಕ್ಷೀಣಿಸುತ್ತಾ ಬಂದಿದೆ. ಈ ಆತಂಕಕಾರಿ ಬೆಳವಣಿಗೆಯನ್ನು ತಡೆಯಲು ಕೆಲವು ಮುಂಜಾಗ್ರತಾ ಕ್ರಮಗಳನ್ನು ಬ್ಯಾಂಕರುಗಳು ತರಲು ಯತ್ನಿಸುತ್ತಿದ್ದಾರೆ. ಇವರಲ್ಲಿ ಕೆಲವನ್ನು ಹೆಸರಿಸುವುದಾದರೆ :

1 ವಿಶೇಷ ಸಾಲ ಮರುಪಾವತಿ ಶಿಬಿರಗಳು, 2 ವಸೂಲಾತಿ ಅಧಿಕಾರಿಗಳ ನೇಮಕ, 3 ಆದ್ಯತಾವಲಯದ ಸಾಲ ವಸೂಲಾತಿಗೆ ಸರಕಾರಿ ಅಧಿಕಾರಿಗಳನ್ನು ತೊಡಗಿಸುವುದು, 4 ಭಾರಿ ಹಾಗೂ ಮಧ್ಯಮ ಗಾತ್ರದ ಅಸ್ವಸ್ಥ ಉದ್ಯಮಗಳ ನೆರವಿಗೆ ಕೈಗಾರಿಕಾ ಮತ್ತು ಹಣಕಾಸು ಪುನರ್‍ರಚನಾ ಮಂಡಲಿಯ ಸ್ಥಾಪನೆ, 5 ರಾಜ್ಯ ಪ್ರಸ್ತಾವನೆಗಳು, 6 ಅಗತ್ಯ ಬಿದ್ದಾಗ ಚಕ್ರಬಡ್ಡಿಯನ್ನು ಸರಳ ಬಡ್ಡಿಯನ್ನಾಗಿ ಅಥವಾ ಒಟ್ಟು ಬಡ್ಡಿಯ ಮೊತ್ತದಲ್ಲಿ ಕಡಿತವನ್ನು ಮಾಡಿಕೊಳ್ಳುವ ಕ್ರಮಗಳು, ಇತ್ಯಾದಿ.

ಈ ನಿಷ್ಕ್ರಿಯ ಆಸ್ತಿಗಳ ನಿರ್ವಹಣೆಯನ್ನು ಸಂಕ್ಷಿಪ್ತವಾಗಿ ಎರಡು ಭಾಗಗಳಲ್ಲಿ ವಿಂಗಡಿಸಬಹುದು : ಕಾನೂನು ಪರಿಹಾರಗಳು ಮತ್ತು ಕಾನೂನೇತರ ಪರಿಹಾರಗಳು.

## ಕಾನೂನಿನ ಪರಿಹಾರಗಳು

ನಮ್ಮ ದೇಶದಲ್ಲಿ ಮಂದಗತಿಯಲ್ಲಿ ಸಾಗುತ್ತಿರುವ ಕಾನೂನಿನ ವ್ಯವಸ್ಥೆ ಬ್ಯಾಂಕಿನ ಸಾಲ ವಸೂಲಾತಿಗೆ ಯಾವುದೇ ರೀತಿಯಲ್ಲೂ ಪೂರಕವಾಗಿಲ್ಲ ಮತ್ತು ಒಂದು ದೊಡ್ಡ ಸವಾಲಾಗಿ ನಿಂತಿದೆ. ಸಾಲ ವಸೂಲಾತಿ ನ್ಯಾಯಾಲಯದ ನಿರ್ಣಯಗಳು 8ರಿಂದ 10 ವರ್ಷಗಳ ವರೆಗೆ ಸಮಯ ತೆಗೆದುಕೊಂಡಿರುವ ಅನೇಕ ನಿದರ್ಶನಗಳು ನಮ್ಮ ಮುಂದೆ ಇವೆ ಮತ್ತು ಈ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರುವುದು ದುಸ್ಸಾಹಸದ ಸಂಗತಿ. "ನಿಧಾನವಾದ ನ್ಯಾಯ ನಿರಾಕರಿಸಿದ ನ್ಯಾಯ" ಎಂಬ ನಾಣ್ಣುಡಿ ಸಾಲ ವಸೂಲಾತಿಗೆ ಸಂಪೂರ್ಣವಾಗಿ ಅನ್ವಯಿಸುತ್ತದೆ.

ಈ ಅಸಹಾಯಕ ಪರಿಸ್ಥಿತಿಯನ್ನು ಸರಿಪಡಿಸಲು ಕೆಲವು ಉಪಾಯಗಳನ್ನು ಹೇಳಬಹುದು :

1 ಕಾನೂನಿನ ಕ್ರಮಕ್ಕಿಂತ ಮೊದಲು ಸಾಲ ವಸೂಲಾತಿಗೆ ಒತ್ತಡ ಕ್ರಮಗಳನ್ನು ಅನುಸರಿಸುವುದು (Pressure technics) ;
2 ಕಾನೂನಿನ ಕ್ರಮ ಜರುಗಿಸುವ ಮುನ್ನ ದೊರೆಯಬಹುದಾದ ವಿವಿಧಆಸ್ತಿಗಳ ತಪಶೀಲುಪಟ್ಟಿಯ ತಯಾರಿಕೆ (inventory); ಇದರಲ್ಲಿ ಬ್ಯಾಂಕಿಗೆ ಮುಂಚೆ ಅಡವಿಟ್ಟ, ಹಾಗೂ ಅಡವಿಡದ ಎಲ್ಲ ಆಸ್ತಿಗಳನ್ನು ಸೇರಿಸಬೇಕು ; ನಂತರ ಅಗತ್ಯ ಬಿದ್ದಾಗ ಮಾತ್ರ ಉಳಿದ ಹಣಕ್ಕಾಗಿ ಕಾನೂನಿನ ಕ್ರಮ ಜರುಗಿಸಬಹುದು ;
3 ಒಮ್ಮೆ ನ್ಯಾಯಾಲಯದ ಮೊರೆಹೊಕ್ಕ ನಂತರ ನ್ಯಾಯಾಲಯದ ನಿರ್ಣಯ ದೊರೆಯುವವರೆಗೂ ಸತತವಾಗಿ ಅನುವರ್ತನೆ (Followup) ಮಾಡಬೇಕು :
4 ನ್ಯಾಯಾಲಯದ ನಿರ್ಣಯ ಪಡೆದ ಕೂಡಲೆ ಅದನ್ನು ಜಾರಿಗೊಳಿಸಲು ತುರ್ತುಕ್ರಮ ಕೈಗೊಳ್ಳುವುದು ; ಇದಕ್ಕೆ ಕೇವಲ ಬ್ಯಾಂಕಿನ ಕ್ರಮಗಳಲ್ಲದೆ ಹೊರಗಿನ ವ್ಯಕ್ತಿ/ಸಂಸ್ಥೆಗಳ ಸಹಾಯ ಸಹ ಪಡೆಯಬೇಕು ;
5 ಬ್ಯಾಂಕ್ ಸಾಲ ವಸೂಲಾತಿಗೆ ವಿಶೇಷ ನ್ಯಾಯಾಲಯದ ಸ್ಥಾಪನೆ ;
6 ಆದ್ಯತಾವಲಯದ ಸಾಲ ವಸೂಲಾತಿಯಲ್ಲಿ ಬ್ಯಾಂಕುಗಳಿಗೆ ಆಸ್ತಿಗಳ ಜಡತಿ ಮತ್ತು ವಿಲೇವಾರಿಗಳ ನೇರ ಹಕ್ಕು ದೊರೆಯಬೇಕು.

## ಕಾನೂನೇತರ ಸಲಹೆಗಳು

ಕಾನೂನಿನ ಸಹಕಾರದಿಂದ ವಸೂಲು ಮಾಡುವ ಒಟ್ಟು ಸಾಲದ ಮೊತ್ತ, ಕಾನೂನಿಗೆ ಇರುವ ಮಿತಿಗಳಿಂದಾಗಿ ಹೆಚ್ಚಿನ ಪ್ರಯೋಜನಕಾರಿಯಲ್ಲ. ಏಕೆಂದರೆ ವಸೂಲಾತಿ ಶೀಘ್ರವಾಗಿ ಆದರೆ ಆ ಹಣವನ್ನು ಮತ್ತೆ ಚಾಲನೆಯಲ್ಲಿ ಬಿಡಬಹುದು. ತಡವಾಗಿ ವಸೂಲಾಗುವ ಹಣದಿಂದ ಅದರ ಮೇಲೆ ತಗಲುವ ಕಾನೂನಿನ ಹಾಗೂ ಇನ್ನಿತರ ಖರ್ಚುಗಳು ಹೆಚ್ಚಾಗಿ, ಬ್ಯಾಂಕುಗಳಿಗೆ ಉಪಯೋಗವಾಗುವ ನಿವ್ವಳ ಆದಾಯ ಬಹಳ ಕಡಿಮೆ. ಹಾಗಾಗಿ ಕಡಿಮೆ ಸಮಯದಲ್ಲಿ ಅಲ್ಪ ಮೊತ್ತದ ಹಣ ವಸೂಲಾದರೂ, ಬ್ಯಾಂಕ್‌ಗಳಿಗೆ ಅದರ ಪುನರ್ ಚಾಲನೆಗೆ ಉಪಯೋಗವಾಗುತ್ತದೆ. ಮತ್ತು ಬ್ಯಾಂಕ್‌ಗಳ ದ್ರವತೆ ಸಹ ಸಾಕಷ್ಟು ಇದರಿಂದ ವೃದ್ಧಿಯಾಗುತ್ತದೆ. ಉದಾಹರಣೆಗೆ ಬ್ಯಾಂಕುಗಳು ತಮ್ಮ 100 ರೂ. ಠೇವಣಿ ಹಣದಲ್ಲಿ ಕೇವಲ 36.50 ಮಾತ್ರ ಸಾಲದ ರೂಪದಲ್ಲಿ ಕೊಡಬಹುದಾಗಿದೆ. ಈ ಸಾಲದ ಹಣದಲ್ಲಿ ಶೇಕಡ 40ರಷ್ಟು ಆದ್ಯತಾವಲಯದ ಸಾಲಗಳಿಗೆ ಮೀಸಲಾಗಿಡಬೇಕಾಗಿದೆ. ಹಾಗಾಗಿ ಕೇವಲ ರೂ. 21.90ರಷ್ಟು ಮಾತ್ರ ಬ್ಯಾಂಕ್‌ಗಳಿಗೆ ವಾಣಿಜ್ಯ ದರದಲ್ಲಿ ಸಾಲ ನೀಡಬಹುದು. ಆದ್ದರಿಂದ ನಿಷ್ಕ್ರಿಯ ಆಸ್ತಿಗಳ ಮೊತ್ತ ಎಷ್ಟು ಜಾಗ್ರತೆಯಾಗಿ ವಸೂಲಾದರೆ ಅಷ್ಟು ಒಳ್ಳೆಯದು. ಈಗ ನಮ್ಮ ಮುಂದೆ ಇರುವ ಹಲವಾರು ಕಾನೂನೇತರ ಸಲಹೆಗಳ ಬಗ್ಗೆ ಮತ್ತು ಅದರಲ್ಲಿರುವ ಮಿತಿ ಮತ್ತು ಸಲಹೆಗಳ ಬಗ್ಗೆ ಗಮನ ಹರಿಸೋಣ.

## ರಾಜಿ ವಿಧಾನ

ಈ ಸಲಹೆ ಕಾನೂನೇತರ ಸಲಹೆಗಳಲ್ಲಿ ಅತ್ಯಂತ ಸುಲಭವಾದದ್ದು ಹಾಗೂ ಲಾಭದಾಯಕವಾದದ್ದು. ಇದನ್ನು ಸ್ವಇಚ್ಛೆ ಸಾಲ ಕಡಿತ (Voluntary debt reduction) ಎಂದೂ ಕರೆಯುತ್ತಾರೆ. ಬ್ಯಾಂಕುಗಳಿಗೆ ಸಾಲ ವಸೂಲಾತಿ ಮಾಡುವ ಸಂದರ್ಭದಲ್ಲಿ ಕಡಿಮೆ ಅವಕಾಶಗಳಿದ್ದು, ಸಾಲಗಾರನಿಗೆ ಹಣ ಮರುಪಾವತಿ ಮಾಡುವ ಕಡಿಮೆ ಅವಕಾಶಗಳಿದ್ದ ಸಂದರ್ಭಗಳಲ್ಲಿ ಈ ಸಲಹೆ ಬಹಳ ಪರಿಣಾಮಕಾರಿ. ಇದು ಬ್ಯಾಂಕ್ ಮತ್ತು ಸಾಲಗಾರ ಇಬ್ಬರಿಗೂ

ಪರಸ್ಪರ ಒಂದು ಅಂತಿಮ ನಿರ್ಣಯಕ್ಕೆ ಬರುವ ಆಸೆ ಇದೆ ಎಂಬು ದನ್ನು ಎತ್ತಿ ತೋರಿಸುತ್ತದೆ. ಆದರೆ ಇವರಿಂದ ಬ್ಯಾಂಕರುಗಳು ಕಾನೂನಿನ ಅಸಹಾಯಕತೆಯಿಂದ ಪದೇಪದೇ ನಷ್ಟವನ್ನು ಭರಿಸ ಬೇಕು ಎಂಬುದನ್ನು ಸಹ ಎತ್ತಿ ತೋರಿಸುತ್ತದೆ. ಹಾಗೂ ಸಾಲ ಗಾರನು ಬ್ಯಾಂಕಿನ ಈ ಅಸಹಾಯಕತೆಯ ಸ್ಥಿತಿಯ ದುರುಪಯೋಗ ಮಾಡಿಕೊಂಡು, ಆದಷ್ಟು ಕಡಿಮೆ ಮೊತ್ತದಲ್ಲಿ ತನ್ನ ಋಣ ವನ್ನು ತೀರಿಸಲು ನೋಡುತ್ತಾನೆ. ಹಾಗಾಗಿ ಕಾನೂನಿನಉಪಯೋಗ ಹೆಚ್ಚಾದಷ್ಟೂ ಈ ತರಹದ ಒಡಂಬಡಿಕೆಯಿಂದಾಗುವ ವಸೂ ಲಾತಿಯ ಮೊತ್ತ ಸಹ ಹೆಚ್ಚಾಗಬಹುದು. ಈಗಿರುವ ಬ್ಯಾಂಕಿನ ವ್ಯವಸ್ಥೆಯಲ್ಲಿ ಈ ತರಹದ ಸಂದರ್ಭಗಳಲ್ಲಿ ಅಂತಿಮ ನಿರ್ಧಾರ ವನ್ನು ಮೇಲಧಿಕಾರಿಗಳವರೇ ತೆಗೆದುಕೊಳ್ಳಬೇಕಾದ್ದರಿಂದ ಇದಕ್ಕೆ ಉಂಟಾಗುವ ಸಮಯ ಬಹಳವಾಗುತ್ತದೆ. ಸಾಲಗಾರರು ಇದರ ದುರುಪಯೋಗ ಪಡೆದುಕೊಂಡು ಹಣವನ್ನು ಮತ್ತೆ ಬೇರೆಡೆಗೆ ಉಪಯೋಗಿಸುವ ಸಂದರ್ಭಗಳು ಹೆಚ್ಚು. ಮತ್ತು ಈ ವಿಧಾನ ದಲ್ಲಿ ಉದ್ದೇಶಪೂರಕ ಬಾಕಿದಾರರು ಸಾಲ ಮರುಪಾವತಿ ಮಾಡದೆ ಸೌಲಭ್ಯದ ದುರುಪಯೋಗ ಮಾಡಿಕೊಳ್ಳುವ ಸಾಧ್ಯತೆಗಳು ಸಹ ಹೆಚ್ಚಾಗಿವೆ.

**ಕೈಗಾರಿಕಾ ಮತ್ತು ಹಣಕಾಸು ಪುನರ್ರಚನಾ ಮಂಡಲಿ**

ಭಾರತ ಸರಕಾರ ಸ್ಥಾಪಿಸಿದ ಈ ಸಂಸ್ಥೆ ಭಾರಿ ಹಾಗೂ ಮಧ್ಯಮ ಕೈಗಾರಿಕೆಗಳಿಗೆ. ಇತ್ತೀಚಿನ ವರ್ಷಗಳಲ್ಲಿ ಬಹಳ ಪೂರಕವಾಗಿದೆ. ಅಸ್ವಸ್ಥ ಸಾರ್ವಜನಿಕ ಉದ್ಯಮಗಳು ಈ ಸಂಸ್ಥೆಯ ಅಧೀನದಲ್ಲಿ ಬರುತ್ತವೆ. ಈ ಸಂಸ್ಥೆ ಗುರುತಿಸಿದ ಈ ತರಹದ ಅಸ್ವಸ್ಥ ಸಂಸ್ಥೆ ಗಳಿಗೆ ಬ್ಯಾಂಕುಗಳು ಮರುಸಾಲ ಕೊಡುವ ಆವಶ್ಯಕತೆ ಬರುವು ದಿಲ್ಲ. ಈ ಮಂಡಳಿಗೆ ಅಸ್ವಸ್ಥ ಘಟಕಗಳನ್ನು ಮುಚ್ಚಲು ಉಚ್ಚ ನ್ಯಾಯಾಲಯಗಳಿಗೆ ಸೂಚಿಸುವ ಅಧಿಕಾರವಿದೆ. ಮತ್ತು ಮಂಡಳಿ ತೆಗೆದುಕೊಂಡ ಯಾವುದೇ ನಿರ್ಧಾರಕ್ಕೆ ನ್ಯಾಯಾಲಯ ಬದ್ಧ ವಾಗಿರಬೇಕಾಗಿದೆ. ಈ ಮಂಡಳಿ ಯಾವುದೇ ಅಸ್ವಸ್ಥ ಘಟಕ ವನ್ನು ಯಾರಿಗೆ ಬೇಕಾದರೂ ಮಾರಾಟ ಮಾಡಬಹುದು. ಆ ನಂತರ ಘಟಕಗಳಲ್ಲಿ ಯಾವುದೇ ತೆರನಾದ ಲೋಪ ದೋಷಗಳು ಕಂಡುಬಂದಲ್ಲಿ ಅದನ್ನು ಸರಿಪಡಿಸಿ ಬೇರೆಯವರಿಗೆ ವರ್ಗಾಯಿಸುವ ಅಧಿಕಾರವನ್ನು ಸಹ ಈ ಸಂಸ್ಥೆ ಹೊಂದಿದೆ.

ಈ ವಿಧಾನದಿಂದ ಕಡಿಮೆ ಸಮಯದಲ್ಲಿ ಹೆಚ್ಚಿನ ಮೊತ್ತ ನಷ್ಟ ಆಸ್ತಿಯ ರೂಪದಿಂದ ನಗದಿ ಆಸ್ತಿಯಾಗಿ ಪರಿವರ್ತನೆಗೊಳ್ಳು ವುದರಿಂದ ಬ್ಯಾಂಕರ್‌ಗಳು ಈ ಸಂಸ್ಥೆಯ ಹೆಚ್ಚಿನ ಉಪಯೋಗ ಪಡೆದುಕೊಳ್ಳುವುದು ಉತ್ತಮ.

**ವಿಲೀನ ಮತ್ತು ಸ್ವಾಧೀನ**

ಅಭಿವೃದ್ಧಿಯಾಗಿರುವ ಘಟಕಗಳು ರೋಗಗ್ರಸ್ತ ಘಟಕಗಳನ್ನು ವಿಲೀನಗೊಳಿಸಿಕೊಂಡು ತಮ್ಮಲ್ಲಿನ ಆರ್ಥಿಕ ವ್ಯವಸ್ಥಾಪನ (Managerial) ಮತ್ತು ಇನ್ನಿತರ ಸಂಪತ್ತನ್ನು ರೋಗಗ್ರಸ್ತ ಘಟಕಗಳ ಪುನರುಜ್ಜೀವನಕ್ಕೆ ಉಪಯೋಗಿಸಿಕೊಳ್ಳಬಹುದು. ಆದಾಯ ತೆರಿಗೆಯ ಆದೇಶದ ಮೇರೆಗೆ ತಮ್ಮಲ್ಲಿ ಗಳಿಸಿದ ಲಾಭ ವನ್ನು ವಿಲೀನಗೊಂಡ ಸಂಸ್ಥೆಯ ನಷ್ಟಕ್ಕೆ ಉತ್ತಾರ ಹಾಕಿಕೊಳ್ಳುವ ಅವಕಾಶ ಸಹ ಇದೆ ಈ ರೀತಿಯ ಬಡ್ಡಿರಹಿತ ಹಣವನ್ನು ವಿಲೀನಗೊಳಿಸಿದ ಸಂಸ್ಥೆಯ ಪುನರುಜ್ಜೀವನಕ್ಕೆ ಉಪಯೋಗಿಸ ಬಹುದು.

**ಋಣ ವಟಾವಣೆ**

ರೋಗಗ್ರಸ್ತ ಘಟಕಗಳ ಸಾಲವನ್ನು ಮತ್ತೊಂದು ಬ್ಯಾಂಕಿನ ಮೂಲಕವೇ ಖರೀದಿಸುವ ವ್ಯವಸ್ಥೆಗೆ ಋಣ ವಟಾಯಿಸುವಿಕೆ ಎನ್ನುತ್ತಾರೆ. ಈ ತರಹದ ಪ್ರಸ್ತಾವಗಳು ನಮ್ಮ ದೇಶದಲ್ಲಿ ಇತ್ತೀ ಚೇಗಷ್ಟೇ ಪ್ರಾರಂಭವಾಗಿದೆ. ಕೆಲವು ಬ್ಯಾಂಕುಗಳು ತಮ್ಮಲ್ಲಿರುವ ಅನೇಕ ಲೋಪ ದೋಷಗಳಿಂದಾಗಿ ಹಣ ವಸೂಲು ಮಾಡಲಾಗದ ಪರಿಸ್ಥಿತಿಯಲ್ಲಿರುತ್ತದೆ. ಅದೇ ಸಮಯದಲ್ಲಿ ಕೆಲವು ಬ್ಯಾಂಕುಗಳಿಗೆ ಒಳ್ಳೆಯ ಅಧೋರಚನೆ, ಸಿಬ್ಬಂದಿ ಸಹಾಯ, ಹೆಚ್ಚು ಪರಿಣತಿ ಹಾಗು ಸೌಲಭ್ಯಗಳು ಇರುತ್ತದೆ. ಇವುಗಳ ಉಪಾಯಗಳಿಂದ ಋಣ ವಟಾಯಿಸುವ ಕಾರ್ಯವನ್ನು ಈ ಬ್ಯಾಂಕುಗಳು ಹೆಚ್ಚು ದಕ್ಷತೆಯಿಂದ ನಿರ್ವಹಿಸಬಹುದು. ಈ ತಂಡದ ವ್ಯವಸ್ಥೆ ಹೆಚ್ಚು ಮಟ್ಟಿಗೆ ಭಾರಿ ಉದ್ಯಮಗಳಿಗೆ ಅನ್ವಯಿಸುತ್ತದೆ.

**ಡಿಕ್ರಿಗಳ ಖರೀದಿ**

ಡಿಕ್ರಿಗಳನ್ನು ಜಾರಿ ಮಾಡುವಲ್ಲಿ ಇರುವ ತೊಂದರೆ ಮತ್ತು ವಿಳಂಬವನ್ನು ತಪ್ಪಿಸಲು, ಬ್ಯಾಂಕುಗಳು ವಸೂಲಾತಿಯಲ್ಲಿ ಪರಿಣತಿ ಹೊಂದಿರುವ ಹೊರಗಡೆಯ ಸಂಸ್ಥೆಗಳಿಗೆ ಡಿಕ್ರಿಗಳನ್ನು ವಟ್ಟದ ದರದಲ್ಲಿ (discount) ಮಾರಾಟ ಮಾಡಿ ಹೆಚ್ಚಿನ ಉಪಯೋಗ ಪಡೆಯಬಹುದು.

**ಸಾಲ ಮನ್ನಾ**

ಸಣ್ಣ ಪ್ರಮಾಣದ ಸಾಲಗಳು, ಆದ್ಯತಾ ವಲಯದ ಸಾಲಗಳು, ಭದ್ರತೆ ಇಲ್ಲದ ಸಾಲಗಳು ಹಾಗೂ ಇತರೆ ಆದಾಯ ಕಡಿಮೆ ಮತ್ತು ವಸೂಲಾತಿಯ ಖರ್ಚು ಹೆಚ್ಚಾಗಿರುವ ಸಾಲ ಮನ್ನಾ ಮಾಡುವುದರ ಮೂಲಕ ಬ್ಯಾಂಕುಗಳು ತಮ್ಮ ನಿಷ್ಕ್ರಿಯ ಆಸ್ತಿಯ ಮೊತ್ತವನ್ನು ಕಡಿಮೆ ಮಾಡಿಕೊಳ್ಳಬಹುದು.

**ರಾಜ್ಯ ಸರ್ಕಾರಗಳ ಸಹಯೋಗ**

ಬ್ಯಾಂಕ್ ಸಾಲ ವಸೂಲಾತಿಗೆ ಹಲವಾರು ರಾಜ್ಯಸರ್ಕಾರಗಳು ಕಾನೂನಿನ ಸರಳೀಕೃತ ವಿಧಾನಗಳನ್ನು ಜಾರಿಗೊಳಿಸಿವೆ. ಇದರ ಪ್ರಯೋಜನವನ್ನು ಹೆಚ್ಚಿನ ಮಟ್ಟದಲ್ಲಿ ಬ್ಯಾಂಕುಗಳು ಪಡೆದು ಕೊಂಡು ವಸೂಲಾತಿಯನ್ನು ತೀವ್ರಗೊಳಿಸಬಹುದು.

**ಜಪ್ತಿ ಮತ್ತು ಬಿಕರಿ**

ಚರ ಸ್ವತ್ತುಗಳನ್ನು (Movable assets) ಹೊರಗಡೆಯ ಸಂಸ್ಥೆಗಳಿಗೆ ಜಪ್ತಿ ಮತ್ತು ಬಿಕರಿ ಮಾಡಲು ವಹಿಸುವುದು ವಸೂ ಲಾತಿಯ ಪರಿಣಾಮಕಾರಿ ಕ್ರಮ.

(18ನೇ ಪುಟಕ್ಕೆ)

# ಪ್ಲಾಸ್ಟಿಕ್ ಹಣ: ಉದರಿ ಕಾರ್ಡುಗಳು

**ಹೇಮಚಂದ್ರ**

ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್, ಸ್ಟೇಷನ್ ರಸ್ತೆ ಶಾಖೆ, ರಾಯಚೂರು-584 101

'ಉದರಿ ದೊರಕದು' ಎಂಬ ನಾಮಫಲಕ ಹಾಕಿದ ಅಂಗಡಿಗಳವರೇ ಹಣವಿಲ್ಲದೆ ಸರಕು ವಿಕ್ರಯಿಸುವಂತೆ ಮಾಡಿರುವ ಉದರಿ ಕಾರ್ಡಿನ ಮಹಾತ್ಮೆಗೆ ತಲೆದೂಗದವರು ಯಾರು?

**'ದಯಮಾಡಿ** ಉದ್ರಿ ಕೇಳಬ್ಯಾಡ್ರಿ' ಎಂಬ ನಾಮಫಲಕ ಹೊಂದಿರುತ್ತಿದ್ದ ಕೆಲವು ದೊಡ್ಡ ಅಂಗಡಿಗಳ ಮುಂಗಟ್ಟೆಗಳಲ್ಲಿ ಇಂದು 'ನಾವು ಉದರಿ ಕಾರ್ಡುಗಳನ್ನು ಸ್ವೀಕರಿಸುತ್ತೇವೆ' ಎಂಬ ಫಲಕ ಕಾಣಬರುತ್ತಿದೆ. ಇದು ಮಾರುಕಟ್ಟೆಯಲ್ಲಿ ಉದರಿ ಕಾರ್ಡಿಗಿರುವ ಸಾಮರ್ಥ್ಯವನ್ನು ತೋರಿಸುತ್ತದೆ. ಹಣದ ನಗದು ವ್ಯವಹಾರಕ್ಕೆ ಸರಿಸಮನಾಗಿ ಇಂದು ಉದರಿ ಕಾರ್ಡು ಜಗತ್ತಿನಾದ್ಯಂತ ಬಳಕೆಯಾಗುತ್ತಿದೆ. ಪ್ರತಿಷ್ಠಿತ ಬ್ಯಾಂಕುಗಳೆಲ್ಲವೂ ಇಂದು ಉದರಿ ಕಾರ್ಡ್ ನೀಡಿಕೆ ವ್ಯವಹಾರದಲ್ಲಿವೆಯಲ್ಲದೆ ಕೆಲವು ಬ್ಯಾಂಕೇತರ ಸಂಸ್ಥೆಗಳೂ (ಉದಾ : ಡೈನರ್ಸ್ ಕ್ಲಬ್) ಉದರಿ ಕಾರ್ಡ್ ನೀಡುತ್ತಿವೆ.

ಭಾರತ ದೇಶದ ಮಟ್ಟಿಗೆ ಉದರಿ ಕಾರ್ಡ್ ವ್ಯವಹಾರ ಶೀರಾ ಇತ್ತೀಚಿನದು. ಭಾರತೀಯ ಸ್ಟೇಟ್ ಬ್ಯಾಂಕಿನಿಂದ ಹಿಡಿದು ಖಾಸಗಿ ವಲಯದ ವೈಶ್ಯ ಬ್ಯಾಂಕ್ ನಿಯಮಿತದ ವರೆಗೆ ಅನೇಕ ಬ್ಯಾಂಕುಗಳು ಗ್ರಾಹಕರಿಗೆ ಉದರಿ ಕಾರ್ಡ್ ನೀಡುತ್ತಿವೆ. ಸ್ಟೇಟ್ ಬ್ಯಾಂಕಿನ ಸ್ಟೇಟ್ ಬ್ಯಾಂಕ್ ಕಾರ್ಡ್, ಬ್ಯಾಂಕ್ ಆಫ್ ಬರೋಡಾದ ಬಾಬ್ ಕಾರ್ಡ್, ಕೆನರಾ ಬ್ಯಾಂಕಿನ ಕ್ಯಾನ್ ಕಾರ್ಡ್ ಇತ್ಯಾದಿಗಳು ನಗರ ಪ್ರದೇಶಗಳಲ್ಲಿ ಮನೆಮಾತಾಗಿವೆ.

ಇಂದು ಭಾರತದಲ್ಲಿ ಉದರಿ ಕಾರ್ಡನ್ನು ಹೊಂದಿರುವವರ ಸಂಖ್ಯೆ 5 ಲಕ್ಷದಿಂದ 6 ಲಕ್ಷದ ವರೆಗಿದ್ದು, ಉದರಿ ಕಾರ್ಡನ್ನು ಪಾವತಿಗಾಗಿ ಸ್ವೀಕರಿಸುವ ಸಂಸ್ಥೆಗಳು ಸಾವಿರಗಟ್ಟಲೆ ಇವೆ. ಭಾರತೀಯ ರೈಲ್ವೆ, ಇಂಡಿಯನ್ ಏರ್‌ಲೈನ್ಸ್, ಏರ್ ಇಂಡಿಯಾ ಅಲ್ಲದೆ ಎಲ್ಲ ವಾಯುಯಾನ ಸಂಸ್ಥೆಗಳು, ತಾರಾ ಹೋಟಲುಗಳು, ಗೃಹೋಪಯೋಗಿ ಉಪಕರಣ ಮಾರಾಟದ ಮಳಿಗೆಗಳು, ಬಟ್ಟೆ ಅಂಗಡಿಗಳು ಉದರಿ ಕಾರ್ಡನ್ನು ಪಾವತಿಗಾಗಿ ಸ್ವೀಕರಿಸುತ್ತವೆ.

ಕೆಲವೇ ವರ್ಷಗಳ ಕೆಳಗೆ ಮುಂಬೈ, ದೆಹಲಿಗಳಂಥ ಮಹಾನಗರಗಳಿಗಷ್ಟೇ ಸೀಮಿತವಾಗಿದ್ದ ಈ ಕಾರ್ಡುಗಳು ಇಂದು ಬಿಜಾಪುರ, ಬೆಳಗಾಂ, ಮೈಸೂರು, ರಾಯಚೂರುಗಳಂಥ ಪಟ್ಟಣಗಳಲ್ಲಿಯೂ ದೊರೆಯುತ್ತವೆ. ಇನ್ನು ಕೆಲವೇ ವರ್ಷಗಳಲ್ಲಿ ಗ್ರಾಮಾಂತರ ಪ್ರದೇಶಕ್ಕೂ ಇವು ಬರಬಹುದು.

## ಹಿನ್ನೆಲೆ

ಉದರಿ ಕಾರ್ಡಿನ ಉಗಮದ ಹಿನ್ನೆಲೆಯೂ ಸ್ವಾರಸ್ಯಕರವಾಗಿದೆ. ಡೈನರ್ಸ್ ಕ್ಲಬ್ ಉದರಿ ಕಾರ್ಡನ್ನು ಹುಟ್ಟು ಹಾಕಿದ ರಾಬರ್ಟ್ ಮೆಕ್ನಮಾರಾರವರು ಒಮ್ಮೆ ವ್ಯವಹಾರಸಂಬಂಧಿ ಭೋಜನಕೂಟವೊಂದನ್ನು ಪ್ರತಿಷ್ಠಿತ ಹೋಟೆಲೊಂದರಲ್ಲಿ ಏರ್ಪಡಿಸಿದ್ದರು. ಭೋಜನದ ಬಿಲ್ ಪಾವತಿ ಮಾಡಲು, ಮರೆತು ಮನೆಯಲ್ಲಿಯೇ ಪರ್ಸನ್ನು ಬಿಟ್ಟು ಬಂದಿದ್ದ ಮೆಕ್ನಮಾರಾರವರು ತಮ್ಮ ಪರಿಚಯ ಪತ್ರವನ್ನೇ (visiting card) ನೀಡಿ, ಅನಂತರ ಹಣ ಪಡೆಯುವಂತೆ ವಿನಂತಿಸಿಕೊಂಡರು. ಈ ಘಟನೆಯೇ ಉದರಿ ಕಾರ್ಡಿನ ಹುಟ್ಟಿಗೆ ಪ್ರೇರಕವಾಯಿತು. ಸಮಾಜದ ಪ್ರತಿಷ್ಠಿತ ವ್ಯಕ್ತಿಗಳಿಗೆ ಉದರಿ ಕಾರ್ಡ್ ಹೊಂದುವುದು ಪ್ರತಿಷ್ಠೆಯ ವಿಷಯವಾಯಿತು.

ಭೋಜನ ಕೂಟವೊಂದರ ಬಿಲ್ ಪಾವತಿಯಿಂದ ಹಿಡಿದು ಇಂದು ಯಾವುದೇ ವಸ್ತುವನ್ನು ಖರೀದಿಸುವ ವರೆಗೆ ಉದರಿ ಕಾರ್ಡನ್ನು ಉಪಯೋಗಿಸಬಹುದಾಗಿದೆ, ಪ್ರಯಾಣದ ಟಿಕೇಟು ಕಾದಿರಿಸಲು, ಮನರಂಜನೆ, ವಿವಿಧ ವಸ್ತುಗಳ ಖರೀದಿ, ತಾರಾ ಹೋಟಲುಗಳಲ್ಲಿ ವಾಸ್ತವ್ಯ, ಆಸ್ಪತ್ರೆ ವೆಚ್ಚ ಭರಿಸಲು, ಅಲ್ಲದೇ ಬ್ಯಾಂಕಿನ ಸ್ವಯಂ-ಚಲೀ ಸರಾಫಯಂತ್ರದಿಂದ ಹಣ ಪಡೆಯಲೂ ಉದರಿ ಕಾರ್ಡಿನ ಉಪಯೋಗವಿದೆ.

ಇಂದು ಭಾರತದಲ್ಲಿ ವಿದೇಶಿ, ರಾಷ್ಟ್ರೀಕೃತ ಹಾಗೂ ಖಾಸಗಿ ಬ್ಯಾಂಕುಗಳೂ ಅಲ್ಲದೆ ಕೆಲವು ಬ್ಯಾಂಕೇತರ ಸಂಸ್ಥೆಗಳು (ಉದಾ : ಡೈನರ್ಸ್ ಕ್ಲಬ್, ಸ್ಪೆನ್ಸರ್, ರೆಡಿಮನಿ ಇತ್ಯಾದಿಗಳು) ಉದರಿ ಕಾರ್ಡನ್ನು ನೀಡುತ್ತವೆ. ಕೆಲವು ಬ್ಯಾಂಕುಗಳು ಉದರಿ ಕಾರ್ಡಿಗಾಗಿ ವೀಸ, ಮಾಸ್ಟರ್ ಕಾರ್ಡ್‌ಗಳಂಥ ವಿದೇಶೀ ಕಾರ್ಡ್ ಸಂಸ್ಥೆಗಳ ಸಹಯೋಗವನ್ನು ಹೊಂದಿವೆ.

## ನಿಯಮಾವಳಿಗಳು

ಕಾರ್ಡ್ ನೀಡುತ್ತಿರುವ ಸಂಸ್ಥೆಗಳೆಲ್ಲಾ ಕಾರ್ಡ್ ನೀಡಿಕೆಗಾಗಿ ಏಕರೂಪದ ನಿಯಮಾವಳಿಗಳನ್ನು ಹೊಂದಿಲ್ಲ. ಕೆಲವು ಬ್ಯಾಂಕು

ಗಳು ಉದರಿ ಕಾರ್ಡ್ ನೀಡಲು ಪ್ರವೇಶ ಧನವನ್ನಲ್ಲದೆ ವಾರ್ಷಿಕ ಶುಲ್ಕವನ್ನು ವಿಧಿಸುತ್ತವೆ. ಈ ವಾರ್ಷಿಕ ಶುಲ್ಕವು ಹಲವು ನೂರು ರೂಪಾಯಿಗಳಿಂದ ಒಂದು ಸಾವಿರದ ಐದು ನೂರು ರೂಪಾಯಿ ವರೆಗೆ ಇದೆ. ಕೆಲವು ಉದರಿ ಕಾರ್ಡನ್ನು ನೀಡಲು ಯಾವುದೇ ಪ್ರವೇಶ ಧನವನ್ನು ವಿಧಿಸುವದಿಲ್ಲ. ಆದರೆ ಕಾರ್ಡ್ ನೀಡುವ ಎಲ್ಲ ಸಂಸ್ಥೆಗಳೂ ವ್ಯಕ್ತಿಯೊಬ್ಬನ ಆದಾಯ, ಆತ ನೀಡುವ ಆದಾಯ ತೆರಿಗೆ, ಸಮಾಜದಲ್ಲಿ ಆತನ ಸ್ಥಾನಮಾನ, ಇವಕ್ಕೆ ಹೆಚ್ಚಿನ ಒತ್ತು ನೀಡುತ್ತವೆ.

## ಪಾತ್ರಧಾರಿಗಳು

ಉದರಿ ಕಾರ್ಡ್ ವ್ಯವಹಾರದ ಮುಖ್ಯ ಪಾತ್ರಧಾರಿಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು :

1 ಕಾರ್ಡ್ ನೀಡುವವರು,
2 ಕಾರ್ಡನ್ನು ಹೊಂದಿರುವವರು ಹಾಗೂ
3 ಕಾರ್ಡನ್ನು ಪಾವತಿಗಾಗಿ ಸ್ವೀಕರಿಸುವವರು.

ಕಾರ್ಡನ್ನು ನೀಡುವ ಹಾಗೂ ಕಾರ್ಡನ್ನು ಪಾವತಿಗಾಗಿ ಸ್ವೀಕರಿಸುವ ಸಂಸ್ಥೆ ಅನೇಕ ಬಾರಿ ಒಂದೇ ಆಗಿರಬಹುದು. ಉದಾ : ಸಿಟಿ ಬ್ಯಾಂಕಿನ ಉದರಿ ಕಾರ್ಡನ್ನು ಹೊಂದಿರುವ ವ್ಯಕ್ತಿ ಸಿಟಿ ಬ್ಯಾಂಕಿನ ಸ್ವಯಂಚಲೀ ಸರಾಫಯಂತ್ರದಿಂದ ನಗದು ಹಣ ಪಡೆಯಬಹುದು. ಸ್ಟೇಟ್ ಬ್ಯಾಂಕ್ ಕಾರ್ಡ್ ಹೊಂದಿದ ವ್ಯಕ್ತಿ ಭಾರತದಲ್ಲಿ ಯಾವುದೇ ಸ್ಟೇಟ್ ಬ್ಯಾಂಕಿನಿಂದ ನಿರ್ದಿಷ್ಟ ಮೊತ್ತದ ವರೆಗಿನ ಹಣ ಪಡೆಯಬಹುದು. ಕಾರ್ಡನ್ನು ಹಣದ ಬದಲಿಗೆ ಸ್ವೀಕರಿಸಿದ ವಾಣಿಜ್ಯ ಸಂಸ್ಥೆಗಳು, ಅಂಗಡಿಗಳು ಮರುಪಾವತಿಯನ್ನು ಉದರಿ ಕಾರ್ಡ್ ನೀಡಿರುವ ಬ್ಯಾಂಕಿನಿಂದ ಪಡೆಯಬಹುದು.

## ಮಿತಿಗಳು

ಉದರಿ ಕಾರ್ಡ್ ಹೊಂದಿರುವ ವ್ಯಕ್ತಿಯೊಬ್ಬ ಒಂದು ಸಲಕ್ಕೆ ಎಷ್ಟು ಮೊತ್ತದ ವ್ಯವಹಾರ ಮಾಡಬಹುದು ಎಂಬುದನ್ನು ಕೆಲವು ಸಾರಿ ಕಾರ್ಡಿನ ಮೇಲೆ ನಮೂದಿಸಿರುತ್ತದೆ. ಅದೇ ರೀತಿ ಕಾರ್ಡನ್ನು ಪಾವತಿಗಾಗಿ ಸ್ವೀಕರಿಸುವ ಸಂಸ್ಥೆಗಳಿಗೂ ಮಿತಿ ಇರುತ್ತದೆ. ಈ ಮಿತಿಯನ್ನು ಕಾರ್ಡ್ ನೀಡುವ ಸಂಸ್ಥೆಯ ಜೊತೆ ಸಮಾಲೋಚಿಸಿ ಹೆಚ್ಚು–ಕಡಿಮೆ ಮಾಡಿಕೊಳ್ಳಬಹುದು.

ಉದರಿ ಕಾರ್ಡ್ ಕಳೆದುಹೋದಲ್ಲಿ ಈ ಸಂಬಂಧವಾಗಿ ಪೊಲೀಸರಿಗೆ ನೀಡಿದ ದೂರಿನ ಪ್ರತಿಯೊಂದಿಗೆ ಕಾರ್ಡ್ ನೀಡಿದ ಸಂಸ್ಥೆಗೆ ವಿಷಯ ತಿಳಿಸಬೇಕು. ಆದಷ್ಟು ಬೇಗ ಬದಲಿ ಕಾರ್ಡನ್ನು ನೀಡಿ, ಕಳೆದ ಕಾರ್ಡಿನ ಬಗ್ಗೆ ಜಾಗ್ರತೆ ವಹಿಸಬೇಕು ಎಂಬ ಸೂಚನೆಯನ್ನು ಕಾರ್ಡ್ ಸ್ವೀಕರಿಸುವ ಸಂಸ್ಥೆಗಳಲ್ಲಿ ತಿಳಿಸಬೇಕು.

## ಉಪಯೋಗಗಳು

ಉದರಿ ಕಾರ್ಡ್‌ದಾರನಿಗೆ ಆತ ಕಾರ್ಡ್ ಉಪಯೋಗಿಸಿದ ದಿನಾಂಕದಿಂದ ಪಾವತಿ ದಿನಾಂಕದವರೆಗೆ—೦—ಬಡ್ಡಿದರದಲ್ಲಿ ಹಣ ದೊರೆತಂತಾಗುವದು. ವಿಮಾನಯಾನದ ಟಿಕೇಟು, ಹೋಟೆಲಿನ ಬಿಲ್ಲು ಇವೇ ಹಲವು ಸಾವಿರಗಳಷ್ಟಾಗಬಹುದು. ಪಾವತಿಯನ್ನು ಮುಂದೂಡಿದರೆ ಬಡ್ಡಿ, ಸೇವಾಶುಲ್ಕ ಇತ್ಯಾದಿಯನ್ನು ಕೊಡಬೇಕು. ಮಾರುಕಟ್ಟೆಯಲ್ಲಿಯ ಚಾಲ್ತಿ ಬಡ್ಡಿದರಗಳನ್ನು ಲಕ್ಷ್ಯದಲ್ಲಿರಿಸಿದರೆ ಇದರಿಂದಾಗುವ ಉಳಿತಾಯ ಗಮನಾರ್ಹ. ಜಾಣಾಕ್ಷ ವ್ಯವಹಾರಸ್ಥನೊಬ್ಬ ಇಂಥ ಹಲವು ಕಾರ್ಡುಗಳನ್ನು ಉಪಯೋಗಿಸುತ್ತಾ ಬಡ್ಡಿ ಹಣವನ್ನೇ ಸಾಕಷ್ಟು ಉಳಿಸಬಹುದು.

ಎಲ್ಲೆಡೆಗೂ ನಗದು ಹಣವನ್ನು ಒಯ್ಯುವುದು ಬೇಕಿಲ್ಲ ಎಂಬುದನ್ನು ಉದರಿ ಕಾರ್ಡುಗಳು ಸಾಬೀತುಪಡಿಸಿವೆ. ಹೆಚ್ಚು ಹಣವನ್ನು ನಗದಾಗಿ ಕೊಂಡೊಯ್ಯುವುದು ಆತಂಕಕಾರಿಯಾದ ವಿಷಯ. ಹಣವನ್ನಿಡಲು ಹೆಚ್ಚು ಸ್ಥಳಾವಕಾಶ ಬೇಕಲ್ಲದೆ ಅದರ ಸುರಕ್ಷಿತತೆಯೇ ಒಂದು ದೊಡ್ಡ ತಲೆನೋವಾಗಬಹುದು. ಕಾಗದ ಹಣವನ್ನು ಹೆಚ್ಚು ಹೆಚ್ಚಾಗಿ ಬಳಸುವುದರಿಂದ ಕಾಗದದ ನೋಟುಗಳು ಬೇಗನೇ ಹಾಳಾಗಿ, ನೋಟುಗಳನ್ನು ಹೆಚ್ಚು ಹೆಚ್ಚಾಗಿ ಚಲಾವಣೆಗಾಗಿ ಬಿಡುಗಡೆ ಮಾಡಬೇಕಾಗಿ ಬರಬಹುದು. ಉದರಿ ಕಾರ್ಡ್ ಉಪಯೋಗದಿಂದ ಚಲಾವಣೆಯ ಹಣದ ಪ್ರಮಾಣವನ್ನೇ ತಗ್ಗಿಸಬಹುದು.

ಡೈನರ್ಸ್ ಕ್ಲಬ್‌ನ ಉದರಿ ಕಾರ್ಡು ಭಾರತದ ಅತ್ಯಂತ ದುಬಾರಿ ಕಾರ್ಡ್ ಆಗಿದೆ. ಕಾರ್ಡುದಾರ ನೀಡಬೇಕಾದ ವಾರ್ಷಿಕ ಶುಲ್ಕವೇ ರೂ. 1,500. ಇಂದಿನ ಬೆಲೆಗಳಲ್ಲಿ ಇದೇನೂ ದುಬಾರಿ ಎನಿಸದು. ಜೊತೆಗೆ ಕಾರ್ಡುದಾರನಿಗೆ ದೊರೆಯುವ ಸವಲತ್ತುಗಳನ್ನು ನೋಡಿ : ವಿಮಾನ ನಿಲ್ದಾಣಗಳಿಗೆ ಉಚಿತ ಪ್ರವೇಶ, ಅಂತರರಾಷ್ಟ್ರೀಯ ವ್ಯವಹಾರಸ್ಥ ಪ್ರಯಾಣಿಕರ ಕ್ಲಬ್ಬಿನ ಸದಸ್ಯತ್ವ ಹಾಗೂ ರೂ. ಹತ್ತು ಲಕ್ಷದವರೆಗಿನ ವೈಯುಕ್ತಿಕ ವಿಮೆ.

ಸಿಟಿ ಬ್ಯಾಂಕ್ ಕಾರ್ಡನ್ನು ಹೊಂದಬೇಕಾದರೆ ಸಿಟಿ ಬ್ಯಾಂಕಿನ ಖಾತೆದಾರ ಆಗಿರಬೇಕೆಂದೇನೂ ಇಲ್ಲ. ಡೈನರ್ಸ್ ಕ್ಲಬ್ಬಿನ ಸದಸ್ಯರೂ ಸಿಟಿ ಬ್ಯಾಂಕ್ ಕಾರ್ಡನ್ನು ವಿಶೇಷ ದರಗಳಲ್ಲಿ (special rates) ಪಡೆಯಬಹುದು.

ಉದರಿ ಕಾರ್ಡನ್ನು ನೀಡುವ ಬ್ಯಾಂಕುಗಳಿಗೆ ಠೇವಣಿಯ ಜೊತೆಗೆ ಪ್ರವೇಶ ಶುಲ್ಕ ಹಾಗೂ ವಾರ್ಷಿಕ ಸೇವಾಶುಲ್ಕದಿಂದ ವರಮಾನವಿದೆ. ಅಲ್ಲದೆ ಉದರಿ ಕಾರ್ಡನ್ನು ಪಾವತಿಗಾಗಿ ಸ್ವೀಕರಿಸಿದ ಸಂಸ್ಥೆಗಳೂ ಬಿಲ್ಲಿನ ಶೇ. 3ರಷ್ಟನ್ನು ಉದರಿ ಕಾರ್ಡ್ ನೀಡಿದ ಬ್ಯಾಂಕಿಗೆ ಕೊಡಬೇಕು.

ಜೇಬಿನಲ್ಲಿ ನಗದು ಹಣವಿಲ್ಲದಿದ್ದರೂ ಉದರಿ ಕಾರ್ಡಿನ ಮೂಲಕ ಬೇಕಾದ್ದನ್ನು ಪಡೆಯಬಹುದು. ಅಂಗಡಿಗಳಲ್ಲಿ ವ್ಯಾಪಾರವೂ ಕುದುರುವದಲ್ಲದೆ, ಅಂಗಡಿಯ ವಹಿವಾಟಿನ ಗಾತ್ರದಲ್ಲಿ ಹೆಚ್ಚಳವೂ ಆಗುವದು. ಉದರಿ ಕಾರ್ಡುದಾರ ಜೇಬಿನಲ್ಲಿಯ ಹಣದ ಕಳ್ಳತನವಾಗುವ ಬಗ್ಗೆ ಭಯಪಡದೆ, ಉದರಿ ಕಾರ್ಡೊಂದನ್ನು ಜೇಬಿನಲ್ಲಿಟ್ಟುಕೊಂಡು ತಿರುಗಾಡಬಹುದು.

ಉದರಿ ಕಾರ್ಡಿಗೆ ಸಂಬಂಧಿಸಿದ ಹಾಗೆ ವಂಚನೆ ಪ್ರಕರಣಗಳು ನಡೆದಿಲ್ಲವೆಂದಲ್ಲ. ಕಳೆದುಹೋದ ಕಾರ್ಡನ್ನು ಚಲಾವಣೆಯಲ್ಲಿ ತರುವುದು, ಉದರಿ ಕಾರ್ಡ್ ಉಪಯೋಗಿಸಿ ಖರೀದಿಸಿದ ವಸ್ತು

ಗಳಿಗೆ, ಸ್ವೀಕರಿಸಿದ ಸೇವೆಗಳಿಗೆ, ಬ್ಯಾಂಕಿಗೆ ಹಣ ಜಮಾ ಮಾಡದೆ ಇರುವುದು—ಇಂಥ ಪ್ರಕರಣಗಳೇ ಅನೇಕ. ಉದರಿ ಕಾರ್ಡಿಗೆ ಸಂಬಂಧಪಟ್ಟವರೆಲ್ಲ ಸೇರಿ ನಡೆಸುವ ಸಮಾಲೋಚನೆ, ಪೊಲೀಸು ಹಾಗೂ ಕಾನೂನು ವ್ಯವಸ್ಥೆಯ ಸಂಪೂರ್ಣ ಸಹಕಾರ ಹಾಗೂ ಕಾಲಕಾಲಕ್ಕೆ ಉದರಿ ಕಾರ್ಡ್ ನಿಯಮಾವಳಿಗಳನ್ನು ಪುನರವಲೋಕಿಸಿ ಮಾರ್ಪಾಡುಗಳನ್ನು ಜಾರಿಗೆ ತರುವದರಿಂದ ಈ ಪ್ರಕರಣಗಳನ್ನು ಕಡಿಮೆಗೊಳಿಸಬಹುದು.

ಇಂದು ಕೇವಲ ಮೇಲ್ವರ್ಗದವರ, ಸಿರಿವಂತರ ಹಾಗೂ ನಗರ ವಾಸಿಗಳ ಸ್ವತ್ತಾಗಿರುವ ಉದರಿ ಕಾರ್ಡುಗಳು ಎಲ್ಲರ ಕೈಗೂ ಎಟಕುವಂತಾಗಬೇಕು. ಕಪ್ಪು ಹಣವನ್ನೇ ಚಲಾವಣೆಯಲ್ಲಿ ತಂದು ಬಿಳಿಯದಾಗಿಸುವ ಮಹಾನುಭಾವರು ಉದರಿ ಕಾರ್ಡನ್ನು ಬಳಸುವದೇ ಕಡಿಮೆ. ರಸೀತಿ ನೀಡದೆ ವಸ್ತು ವಿಕ್ರಯಿಸಿ, ತೆರಿಗೆ ವಂಚಿಸುವ ಅಂಗಡಿಗಳು ಇರುವವರೆಗೆ ಉದರಿ ಕಾರ್ಡ್ ಎಷ್ಟು ಮಟ್ಟಿಗೆ ಸಹಾಯಕವಾಗಬಹುದೋ !

ಪಾಶ್ಚಾತ್ಯ ದೇಶಗಳಲ್ಲಿ ತಮ್ಮ ದೈನಂದಿನ ವ್ಯವಹಾರಗಳಿಗೆ ಉದರಿ ಕಾರ್ಡನ್ನೇ ನೆಚ್ಚಿಕೊಂಡಿರುವಂಥ ಸ್ಥಿತಿ ಭಾರತದಲ್ಲಿಯೂ ಬರುವ ದಿನ ಬಹಳ ದೂರವಿಲ್ಲ. ★

# ಆದಾಯ ಗುರುತಿಸುವಿಕೆ ಮತ್ತು ಆಸ್ತಿ ವರ್ಗೀಕರಣ

(12ನೇ ಪುಟದಿಂದ)

7 ಅಸ್ವಸ್ಥ ಉದ್ಯಮಗಳ ಹೆಸರಿನಲ್ಲಿ ಉದ್ಯಮಿಗಳು ಶ್ರೀಮಂತರಾಗುವುದನ್ನು ತಪ್ಪಿಸಲು "ಕಠಿಣ ಶಿಕ್ಷೆಯ" ಕಾನೂನು.

8 ಬ್ಯಾಂಕಿನ ಋಣಗಳನ್ನು ರೆವಿನ್ಯೂ ಋಣಗಳೆಂದು ಪರಿಗಣನೆ.

9 ಕಾಲಪರಿಮಿತಿ ಅಧಿನಿಯಮದಿಂದ ಬಿಡುಗಡೆ.

10 ಮೀಸಲು ತೆಗೆದ ಹಣಕ್ಕೆ ತೆರಿಗೆ ರಿಯಾಯಿತಿ.

11 ಸಾಲಮನ್ನಾಗಳಿಂದ ಉಂಟಾದ ವಾತಾವರಣದ ಬದಲಾವಣೆಗೆ ರಾಜಕೀಯ ಪ್ರಯತ್ನ, ಸಂಕಲ್ಪ.

12 ನಷ್ಟದ ಋಣಗಳನ್ನು ಸರ್ಕಾರ ಕೊಳ್ಳಬೇಕು ಅಥವಾ "ಆಸ್ತಿಗಳ ಪುನರ್‌ನಿರ್ಮಾಣನಿಧಿ"ಯ ಸ್ಥಾಪನೆ (ನರಸಿಂಹಂ ಸಮಿತಿ ವರದಿಯಂತೆ).

13 ಇದಲ್ಲದೆ ಗ್ರಾಹಕ ಸೇವೆ, ಮಾರುಕಟ್ಟೆಯ ಅವಶ್ಯಕತೆ, ಖರ್ಚಿನ ಮೇಲೆ ನಿಗಾ, ಗಣಕೀಕರಣ ಹಾಗೂ ಪೈಪೋಟಿಯ ಕಡೆ ಗಮನ ಹರಿಸದೆ ಇದ್ದಲ್ಲಿ, ಬ್ಯಾಂಕುಗಳ ಭವಿಷ್ಯ ಗಂಭೀರವಾಗಿ ಪರಿಣಮಿಸುವುದರಲ್ಲಿ ಸಂಶಯವಿಲ್ಲ. ★

# ನಿಷ್ಕ್ರಿಯ ಆಸ್ತಿಗಳ ನಿರ್ವಹಣೆ

(15ನೇ ಪುಟದಿಂದ)

## ಮಾನವೀಯ ಸಂಬಂಧಗಳು

ಕಡೆಯದಾಗಿ, ಕಡೆಗಣಿಸಲಾಗದ ಈ ಮಾನವಿಕ ಸಂಬಂಧಗಳು ನಿಷ್ಕ್ರಿಯ ಆಸ್ತಿಗಳ ನಿರ್ವಹಣೆಯಲ್ಲಿ ಗುರುತರವಾದ ಜವಾಬ್ದಾರಿಯನ್ನು ಹೊಂದಿರುತ್ತವೆ. ಬ್ಯಾಂಕರುಗಳು ಸಾಲಗಾರರ ನಿಜವಾದ ತೊಂದರೆಗಳನ್ನು ಸರಿಯಾಗಿ ಅರ್ಥೈಸಿ, ಸಹಕರಿಸುವುದು ಬಹಳ ಮುಖ್ಯ. ಸಾಲಗಾರರಿಗೆ ಬ್ಯಾಂಕ್ ತೆಗೆದುಕೊಳ್ಳುತ್ತಿರುವ ಕಾನೂನು ಮತ್ತು ಇತರ ಕ್ರಮಗಳು ಕೊನೆಯ ಅಸ್ತ್ರ ಎಂಬುದು ಮನವರಿಕೆಯಾಗಬೇಕು. ಸಾಲಗಾರರೊಡನೆ ನಿರಂತರವಾದ ಸಂಬಂಧ ಹೊಂದಿದ್ದ ಪಕ್ಷದಲ್ಲಿ ಅನೇಕ ಬಾರಿ ಸಾಲಗಾರರು ನ್ಯಾಯಾಲಯದ ಹೊರಗಡೆಯೇ ಒಂದು ಒಪ್ಪಂದಕ್ಕೆ ಬರುವ ಸಾಧ್ಯತೆಗಳು ತುಂಬಾ ಹೆಚ್ಚು.

ನಿಷ್ಕ್ರಿಯ ಆಸ್ತಿಗಳ ಬೆಳವಣಿಗೆ ಕಡಿತಗೊಳಿಸುವುದು ಕೇವಲ ಧೋರಣೆ, ವ್ಯವಸ್ಥೆ, ಕಾರ್ಯ ವಿಧಾನ ಮತ್ತು ಇತರ ಸಾಧನಗಳಿಂದಲೇ ಸಾಧ್ಯವಿಲ್ಲ. ನಿಷ್ಕ್ರಿಯ ಆಸ್ತಿಯ ಬಗ್ಗೆ ಸಂಬಂಧಪಟ್ಟ ಎಲ್ಲಾ ಸಿಬ್ಬಂದಿಗಳು ಹೆಚ್ಚಿನ ಹೊಣೆ ಹೊತ್ತು ಕಾರ್ಯ ನಿರ್ವಹಿಸಬೇಕು. ತಮ್ಮ ಹಳೆಯ ಅಭ್ಯಾಸಗಳನ್ನು ಮೂಲೆಗೊತ್ತಿ ಆಧುನಿಕ ಮತ್ತು ವಾಸ್ತವಿಕ ವಿಧಾನಗಳನ್ನು ನಿಷ್ಕ್ರಿಯ ಆಸ್ತಿಗಳ ನಿರ್ವಹಣೆಯಲ್ಲಿ ಅನುಸರಿಸಿದರೆ ಒಳ್ಳೆಯದು. ಪರಿಣತಿ ಹೊಂದಿರುವ ನೇತಾರರು ಎಲ್ಲಾ ಹಂತಗಳಲ್ಲಿ ಅತ್ಯಗತ್ಯ. ಈ ನಿಟ್ಟಿನಲ್ಲಿ ಬ್ಯಾಂಕ್ ತನ್ನೆಲ್ಲಾ ಸಿಬ್ಬಂದಿ ವರ್ಗಕ್ಕೆ ಹೆಚ್ಚಿನ ತಿಳುವಳಿಕೆ ಮತ್ತು ಅಗತ್ಯ ತರಬೇತಿ ನೀಡುವುದರ ಮೂಲಕ ಎಲ್ಲರನ್ನೂ ನಿಷ್ಕ್ರಿಯ ಆಸ್ತಿಯ ನಿರ್ವಹಣೆಯಲ್ಲಿ ತೊಡಗಿಸಿದರೆ ಫಲಿತಾಂಶ ಇನ್ನೂ ಹೆಚ್ಚಿನದಾಗುತ್ತದೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ★

## ವಿಳಾಸ ಬದಲಾವಣೆ

'ಬ್ಯಾಂಕಿಂಗ್ ಪ್ರಪಂಚ'ದ ಆಜೀವ ಚಂದಾದಾರರು ತಮ್ಮ ವಿಳಾಸದಲ್ಲಿ ಆಗುವ ಯಾವುದೇ ಬದಲಾವಣೆಯನ್ನು ಕೂಡಲೇ ದಯುವಿಟ್ಟು ತಿಳಿಸಬೇಕು.

ಪ್ರಧಾನ ಕಾರ್ಯದರ್ಶಿ
**ಸಮನ್ವಯ ಸಮಿತಿ**
ಭಾರತೀಯ ಸ್ಟೇಟ್ ಬ್ಯಾಂಕ್, ಕನ್ನಡ ಸಂಘಗಳು
ಭಾರತೀಯ ಸ್ಟೇಟ್ ಬ್ಯಾಂಕ್
(ಬೆಂಗಳೂರು ನಗರ ಶಾಖೆ)
೨೨, ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ೫೬೦ ೦೦೨

# ಜಾಮೀನುದಾರನ ಹೊಣೆಗಾರಿಕೆಯ ವ್ಯಾಪ್ತಿ

**ರಾಜಾರಾಮ ಹೆಗಡೆ**
ಭಾರತೀಯ ಸ್ಟೇಟ್ ಬ್ಯಾಂಕ್, ವಲಯ ಕಛೇರಿ, ಬೆಂಗಳೂರು

**ಜಾಮೀನು** ಭದ್ರತೆ/ಆಧಾರ ಅತ್ಯಂತ ಸರಳ ಮತ್ತು ಸುಲಭದ್ದು ಎನ್ನುವ ಸಾಮಾನ್ಯ ನಂಬುಗೆಯೊಂದಿದೆ. ಆದರೆ ಇದನ್ನು ಜಾರಿಗೊಳಿಸುವ ಸಂದರ್ಭದಲ್ಲಿ ಕಂಡುಬರುವ ಅಡ್ಡಿ ಆತಂಕಗಳನ್ನು ಗಮನಿಸಿದಾಗ ಈ ನಂಬುಗೆ ಸತ್ಯಕ್ಕೆ ದೂರವೆಂದೇ ಹೇಳಬೇಕು.

ಜಾಮೀನುದಾರ 'ಅಚ್ಚುಮೆಚ್ಚಿನ ಅಥವಾ ಆಪ್ತ ಸಾಲಗಾರ' ಎಂಬ ಮಾತೊಂದಿದೆ. ಇದೇಕೆ ವಾಡಿಕೆಗೆ ಬಂತು ಎನ್ನುವುದೂ ಸ್ಪಷ್ಟವಾಗಿಲ್ಲ. ಒಬ್ಬ ಸಾಲ ತೆಗೆದುಕೊಂಡು, ಅದನ್ನು ತೀರಿಸುವ ಸಾಮರ್ಥ್ಯವಿಲ್ಲದವ; ಅವನ ಪರವಾಗಿ ಅವನಂಥವನೇ ಇನ್ನೊಬ್ಬ ಬಂದು ಅವನ ಪರವಾಗಿ ಜಾಮೀನು ನೀಡಿ ಹೊಣೆ ಹೊರಲು ಸಿದ್ಧನಾಗುವವ: ಇಷ್ಟಕ್ಕೆ ತೃಪ್ತಿಪಟ್ಟು ಬ್ಯಾಂಕರುಗಳು ಅವನ ಹಸ್ತಾಕ್ಷರ ಪಡೆದು ತದನಂತರ ಜಾಮೀನನ್ನು ಜಾರಿಗೊಳಿಸುವಾಗ ಪಡುವ ಶ್ರಮ ನೋಡಿ ಅಪಹಾಸ್ಯ ಮಾಡುವವರೂ ಇಲ್ಲದಿಲ್ಲ.

ನೇರವಾಗಿ, ಜಾಮೀನು, ಜಾಮೀನುದಾರನ ಹೊಣೆ ಇತ್ಯಾದಿ ಪ್ರಾಥಮಿಕ ವಿಚಾರಗಳನ್ನು ಉಲ್ಲೇಖಿಸುವ ಗೋಜಿಗೆ ಹೋಗದೆ, ಸಾಲಗಾರ, ಜಾಮೀನುದಾರ ಮತ್ತು ಸಾಲಿಗ (ಬ್ಯಾಂಕರುಗಳು) ಈ ಮೂವರ ನಡುವಿನ ಸಂಬಂಧದ ಪರಿಧಿಯ ಸುತ್ತಲಿನ ಕಾನೂನಿನ ಸ್ಥಿತಿಯನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾತ್ರ ಈ ಪ್ರಬಂಧದಲ್ಲಿ ಮಾಡಲಾಗಿದೆ.

### ಜಾಮೀನುದಾರನ ಹೊಣೆಯ ವ್ಯಾಪ್ತಿ

ಭಾರತೀಯ ಕರಾರು ಒಪ್ಪಂದ ಅಧಿನಿಯಮ 1872, ಪ್ರಕರಣ 128ರ ರೀತ್ಯ ಕರಾರಿನ ಅಂಶಗಳನ್ನು ಹೊರತುಪಡಿಸಿ, ಇನ್ನೆಲ್ಲ ಸಂದರ್ಭದಲ್ಲಿ ಜಾಮೀನುದಾರನ ಹೊಣೆಗಾರಿಕೆಯು, ಸಾಲಗಾರನ ಹೊಣೆಗಾರಿಕೆಯ ಸಹವ್ಯಾಪ್ತಿಯನ್ನು ಹೊಂದಿರುತ್ತದೆ. ಅಂದರೆ ಸಾಲಗಾರನಷ್ಟೇ ಜಾಮೀನುದಾರನೂ ಹೊಣೆಗಾರ, ಬಾಧ್ಯಸ್ತ. ಜಾಮೀನುದಾರನೂ ಸಾಲಗಾರನಂತೆಯೇ ಅಸಲು, ಬಡ್ಡಿ ಮತ್ತು ಖರ್ಚು ಇವೆಲ್ಲಕ್ಕೂ ಹೊಣೆಗಾರನಾಗುತ್ತಾನೆ.

ಈ 'ಸಹವ್ಯಾಪ್ತಿ' ಎನ್ನುವ ಶಬ್ದಪ್ರಯೋಗವೇ ಅನೇಕ ವಿವಾದಗಳಿಗೆ ಎಡೆಮಾಡಿದೆ.

ಒಂದು ವೇಳೆ ಮೂಲ ಕರಾರು (ಸಾಲಗಾರ ಮತ್ತು ಸಾಲಿಗನ ನಡುವಿನ ಒಪ್ಪಂದ) ಜಾರಿಗೊಳಿಸಲು ಅನರ್ಹ ಕರಾರು ಎಂದಿಟ್ಟುಕೊಳ್ಳೋಣ. ಉದಾಹರಣೆಗೆ ಸಾಲಗಾರ ಅಪ್ರಾಪ್ತವಯಸ್ಕನಾಗಿದ್ದರೆ ಅಂತಹ ಕರಾರುಗಳನ್ನು ಜಾರಿಗೊಳಿಸುವಂತಿಲ್ಲ. ಅಂತಹ ಸಂದರ್ಭದಲ್ಲಿ, ಜಾಮೀನುದಾರನು ಹೊಣೆಗಾರನೇ ? ಹೇಗೆ ? ಈ ಪ್ರಶ್ನೆ ತುಂಬ ಮೇಲಿಂದ ಮೇಲೆ ಬ್ಯಾಂಕುಗಳು ಎದುರಿಸಬೇಕಾಗಿವೆ. ಈ ಪ್ರಶ್ನೆ **ಕಾಶಿಬಾ ವಿರುದ್ಧ ಶ್ರೀಪತ್** ಎಂಬ ವ್ಯಾಜ್ಯದಲ್ಲಿ, ಮುಂಬಯಿ ಉಚ್ಚ ನ್ಯಾಯಾಲಯದ ಎದುರು ಬಂತು. ಸಾಲಿಗ ಮತ್ತು ಜಾಮೀನುದಾರ ಇವರ ನಡುವಿನ ಕರಾರು/ಒಪ್ಪಂದ ಸ್ವತಂತ್ರವಾಗಿರುತ್ತದೆ; ಅಲ್ಲದೆ ಸಾಲಗಾರ ಹೊಣೆಯಾದರೆ ಮಾತ್ರ ಜಾಮೀನುದಾರ ಹೊಣೆ ಎಂದು ಎಲ್ಲೂ ಹೇಳಿಲ್ಲ. ಎನ್ನುವ ಕಾರಣಗಳಿಗಾಗಿ, ಮುಂಬಯಿ ಉಚ್ಚನ್ಯಾಯಾಲಯವು ಈ ಮೇಲಿನ ವ್ಯಾಜ್ಯದಲ್ಲಿ, ಮೂಲ ಕರಾರು ಯಾವದೇ ಕಾರಣಕ್ಕೆ ಜಾರಿಗೊಳಿಸಲು ಅನರ್ಹವಾಗಿದ್ದು, ಸಾಲಗಾರ ಹೊಣೆಗಾರನಾಗದಿದ್ದರೂ, ಜಾಮೀನುದಾರ ಹೊಣೆಗಾರನಾಗುತ್ತಾನೆ ಎನ್ನುವ ತೀರ್ಪಿತ್ತಿತು. ಆದರೆ ನಂತರದ ತೀರ್ಪುಗಳು ತದ್ವಿರುದ್ಧವಾಗಿದ್ದು, ಮೂಲ ಕರಾರು ಜಾರಿಗೊಳಿಸಲು ಅನರ್ಹವಾಗಿದ್ದು, ಸಾಲಗಾರ ಹೊಣೆಯಾಗದಿದ್ದ ಪಕ್ಷದಲ್ಲಿ ಜಾಮೀನುದಾರನೂ ಹೊಣೆಗಾರನಾಗುವದಿಲ್ಲ ಎನ್ನುವುದನ್ನು ತಿಳಿಸಿವೆ. ಈ ದಿಸೆಯಲ್ಲಿ ಮಂಜು ಮಹಾದೇವ ವಿರುದ್ಧ ಶಿವಪ್ಪ ಮಂಜು ಮತ್ತು ಇ. ನಂಬಿಯಾರ್ ವಿರುದ್ಧ ಮೂಲಕಿ ರಾಮನ್ ಈ ವ್ಯಾಜ್ಯಗಳನ್ನು ಉಲ್ಲೇಖಿಸಬಹುದಾಗಿದೆ. ಇಲ್ಲಿ ನ್ಯಾಯಾಲಯಗಳು ವ್ಯಾಖ್ಯಾನಿಸಿದ ರೀತಿ ತುಂಬ ಭಿನ್ನವಾಗಿದೆ.

ಪ್ರಕರಣ 128ರ ರೀತ್ಯ ಜಾಮೀನುದಾರನ ಹೊಣೆಗಾರಿಕೆಯು ಸಾಲಗಾರನ ಹೊಣೆಗಾರಿಕೆಯ ಸಹವ್ಯಾಪ್ತಿಯನ್ನು ಹೊಂದಿರುತ್ತದೆ. ಆ ಕಾರಣಕ್ಕಾಗಿ ಜಾಮೀನುದಾರನು ಸಾಲಗಾರನಷ್ಟೆ ಹೊಣೆಗಾರನಾಗಿರುತ್ತಾನೆ. 'ಅವನಷ್ಟೆ' ಎನ್ನುವ ವ್ಯಾಪ್ತಿಯ ಕಾರಣಕ್ಕಾಗಿ ಸಾಲಗಾರ ಹೊಣೆಗಾರನಾಗದ ಪಕ್ಷದಲ್ಲಿ ಜಾಮೀನುದಾರನೂ ಹೊಣೆಗಾರನಾಗಲಾರ. ಜೊತೆಗೆ ಇಲ್ಲಿ ಹೊಣೆಗಾರಿಕೆ ಎನ್ನುವ ಶಬ್ದವನ್ನೂ ತುಂಬ ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಅದು ಕಾನೂನಿನ ದೃಷ್ಟಿಯಲ್ಲಿ ಸಮರ್ಪಕವಾಗಿದ್ದು ಜಾರಿಗೊಳಿಸಲು ಸಾಧ್ಯವಾಗುವಂತಿರಬೇಕು.

ಈಗ ಇನ್ನೊಂದು ಕುತೂಹಲಕರ ಅಂಶದ ಬಗ್ಗೆ ಪರಿಶೀಲಿಸೋಣ.

ಒಂದು ವೇಳೆ ಸಾಲಿಗನು ನಿಗದಿತ ಕಾಲಾವಧಿಯಲ್ಲಿ ದಾವೆ ಮಾಡದೆ, ದಸ್ತಾವೇಜುಗಳು ಕಾಲಪರಿಮಿತಿ ಅವಧಿಯನ್ನು ಮೀರಿ ಹೋದ ಸಂದರ್ಭಗಳಲ್ಲಿ ಜಾಮೀನುದಾರ ಹೊಣೆಗಾರ

ನಾಗುತ್ತಾನೆಯೇ ? ಈ ವಿಚಾರದಲ್ಲಿ ಯಾವುದೇ ವಿವಾದವಿದ್ದಂತಿಲ್ಲ. ಉಚ್ಚ ನ್ಯಾಯಾಲಯಗಳು ಮತ್ತು ಸರ್ವೋಚ್ಚ ನ್ಯಾಯಾಲಯ ಇವೆಲ್ಲ, ಅಂತಹ ಸಂದರ್ಭದಲ್ಲಿ ಜಾಮೀನುದಾರ ಹೊಣೆಯಿಂದ ತಪ್ಪಿಸಿಕೊಳ್ಳುವಂತಿಲ್ಲ ಎಂದು ತಿಳಿಸಿವೆ. ತೀರ್ಪುಗಳು ಇಂತಿವೆ :

1 ಮಹಾಂತ್‌ಸಿಂಗ್ ವಿರುದ್ಧ ಯುಬಿಾ

2 ಬಾಂಬೆ ಡೈಯಿಂಗ್ ವಿರುದ್ಧ ಸ್ಟೇಟ್ ಆಫ್ ಮುಂಬಯಿ.

ಬ್ಯಾಂಕುಗಳು ದಾವೆ ಹಾಕುವ ಸಂದರ್ಭಗಳಲ್ಲಿ ಸಾಲಗಾರನ ವಿರುದ್ಧ ದಾವೆ ಮಾಡದೆ ಕೇವಲ ಜಾಮೀನುದಾರನ ವಿರುದ್ಧ ಮಾತ್ರ ದಾವೆ ಮಾಡಬಹುದೇ ?

ಇದೂ ಕೂಡ ಸಾಧ್ಯವಿದೆ. ಆದರೆ ಹಾಗೆ ಮಾಡುವಾಗ ನ್ಯಾಯಾಲಯದ ಅನುಮತಿ ಪಡೆಯಲೇಬೇಕಾಗುತ್ತದೆ.

**ಜಾಮೀನುದಾರನ ಮರಣ**

ಯಾವುದೇ ಒಬ್ಬ ವ್ಯಕ್ತಿ ವೈಯಕ್ತಿಕ ಜಾಮೀನು ನೀಡಿದ್ದು, ಅತ ಸತ್ತರೆ, ಆತನ ವಾರಸುದಾರರು ಅಂತಹ ಜಾಮೀನು ಪತ್ರಕ್ಕೆ ಹೊಣೆಗಾರರೇ ?

ಜಾಮೀನುದಾರನ ಜೊತೆಯೇ ಜಾಮೀನೂ ಸಾಯುತ್ತದೆ ಎನ್ನುವುದನ್ನು ನೆನಪಿನಲ್ಲಿಡಿ. ಆತನ ವಾರಸುದಾರರು ಅಂತಹ ಯಾವುದೇ ಹೊಣೆಗಾರಿಕೆಗೆ ವೈಯಕ್ತಿಕವಾಗಿ ಹೊಣೆಗಾರರಾಗುವುದಿಲ್ಲ. ಸಾಲಿಗ ಅಂತಹ ವಾರಸುದಾರರ ವಿರುದ್ಧ ದಾವೆ ಹೂಡುವಂತಿಲ್ಲ. ಆದರೆ ಮರಣಹೊಂದಿದ ಜಾಮೀನುದಾರ ಯಾವುದೇ ಆಸ್ತಿಯನ್ನು ಬಿಟ್ಟಿದ್ದು, ಅವು ವಾರಸುದಾರರಿಗೆ ಬಂದಿದ್ದರೆ ಆಗ ಮಾತ್ರ ಸಾಲಿಗನು ಅಂತಹ ಆಸ್ತಿಯ ವಿರುದ್ಧ ದಾವೆ ಹೂಡಿ, ತನ್ನ ಸಾಲ ವಸೂಲಿಗೆ ಕ್ರಮ ಕೈಗೊಳ್ಳಬಹುದಾಗಿದೆ. ಜಾಮೀನುದಾರ ಈ ಕೆಳಗಿನ ಸಂದರ್ಭಗಳಲ್ಲಿ ತನ್ನ ಹೊಣೆಗಾರಿಕೆಯಿಂದ ವಿಮುಕ್ತಗೊಳ್ಳಲ್ಪಡುತ್ತಾನೆ.

(ಅ) ಬ್ಯಾಂಕುಗಳು ಒಂದು ವೇಳೆ ಸಾಲಗಾರನಿಂದ ಪಡೆದ ಯಾವುದೇ ಭದ್ರತೆಗಳು ಕಳೆದುಹೋದಲ್ಲಿ ಅಥವಾ ಹಾನಿಗೊಳಗಾದಲ್ಲಿ, ಇಲ್ಲವೆ ಅನಧಿಕೃತವಾಗಿ ಹಸ್ತಾಂತರಗೊಳಿಸಿದಲ್ಲಿ, ಅಷ್ಟರ ಮಟ್ಟಿಗೆ ಜಾಮೀನುದಾರನ ಹೊಣೆಗಾರಿಕೆ ಕಡಿಮೆಯಾಗುತ್ತದೆ.

(ಆ) ಜಾಮೀನುದಾರನ ಅನುಮತಿ/ತಿಳಿವಳಿಕೆ ಇಲ್ಲದೆ ಸಾಲಿಗ ಮತ್ತು ಸಾಲಗಾರ ಹೊಸ ಒಪ್ಪಂದ ಮಾಡಿಕೊಂಡರೆ ಅಂತಹ ಸಂದರ್ಭದಲ್ಲಿ ಜಾಮೀನುದಾರನು ವಿಮುಕ್ತಿ ಪಡೆಯುತ್ತಾನೆ.

(ಇ) ಜಾಮೀನು ಪತ್ರದಲ್ಲಿ, ಜಾಮೀನುದಾರನ ಹಸ್ತಾಕ್ಷರ ಪಡೆದ ನಂತರ ಯಾವುದೇ ರೀತಿಯ ತಿದ್ದುಪಡಿಯನ್ನು ಆತನ ಒಪ್ಪಿಗೆ/ಅನುಮತಿ ಇಲ್ಲದೆ ಮಾಡಿದಲ್ಲಿ ಜಾಮೀನುದಾರನು ಹೊಣೆಗಾರಿಕೆಯಿಂದ ವಿಮುಕ್ತನಾಗುತ್ತಾನೆ.

(ಈ) ಬ್ಯಾಂಕು ತನ್ನ ಹಕ್ಕನ್ನು (charge) ಪ್ರಾದೇಶಿಕ ಸಾರಿಗೆ ಅಧಿಕಾರಿಗಳಲ್ಲಿ ನೊಂದಾಯಿಸಲು ವಿಫಲವಾಗಿದ್ದು ಸಾಲಗಾರ ಅಂತಹ ಸಂದರ್ಭದಲ್ಲಿ, ವಾಹನವನ್ನು ಯಾವುದೇ ಮೂರನೇ ವ್ಯಕ್ತಿಗೆ ಹಸ್ತಾಂತರಗೊಳಿಸಿದರೆ, ಅಂತಹ ಸಂದರ್ಭದಲ್ಲಿ ಜಾಮೀನುದಾರನು ಹೊಣೆಗಾರಿಕೆಯಿಂದ ಬಿಡುಗಡೆಯಾಗುತ್ತಾನೆ.

(ಉ) ಸಾಲದ ದಿನಾಂಕ ಮತ್ತು ಜಾಮೀನಿನ ದಿನಾಂಕ ಇವೆರಡರ ನಡುವೆ ತುಂಬಾ ಅಂತರವಿದ್ದಾಗ ಬ್ಯಾಂಕುಗಳು ತುಂಬ ಎಚ್ಚರ ವಹಿಸಬೇಕಾಗುತ್ತದೆ. ಬಹುಶಃ ಅಂತಹ ಸಂದರ್ಭದಲ್ಲಿ, ಮುದ್ರಿತ ನಮೂನೆಯ ಬದಲಾಗಿ, ವಿಶಿಷ್ಟ ಅಂಶಗಳನ್ನು ವಿಶೇಷವಾಗಿ ಅಳವಡಿಸಲ್ಪಟ್ಟ ದಸ್ತಾವೇಜುಗಳನ್ನೇ ಉಪಯೋಗಿಸುವುದು ವಿಹಿತ.

ಒಂದು ವೇಳೆ ಸಾಲಗಾರ ಕಂಪನಿಯು ರಾಷ್ಟ್ರೀಕರಣಗೊಂಡಲ್ಲಿ ಅಥವಾ ಸರಕಾರವು ಯಾವುದೇ ಋಣ ವಿಮೋಚನಾ ಕಾಯದೆಯನ್ವಯ ಸಾಲಗಾರನನ್ನು ಋಣಮುಕ್ತಗೊಳಿಸಿದ ಮಾತ್ರಕ್ಕೆ ಜಾಮೀನುದಾರನೂ ಋಣಮುಕ್ತಿಯನ್ನು ಹೊಂದುತ್ತಾನೆ ಎಂದು ಹೇಳಲಾಗುವುದಿಲ್ಲ. ಅಂತಹ ಸಂದರ್ಭಗಳಲ್ಲೂ ಆತ (ಜಾಮೀನುದಾರ) ಬಾಧ್ಯಸ್ತನೇ ಆಗಿರುತ್ತಾನೆ.

**ಜಾಮೀನು ಮತ್ತು ಕಾಲ ಪರಿಮಿತಿ ಅಧಿನಿಯಮ**

ಸಾಲಗಾರ ಮತ್ತು ಜಾಮೀನುದಾರನ ಹೊಣೆಗಾರಿಕೆಯು ಸಹವ್ಯಾಪ್ತಿಯನ್ನು ಪಡೆದಿದ್ದರೂ ಕಾಲ ಪರಿಮಿತಿ ಕಾನೂನು ಇಬ್ಬರಿಗೂ ಒಂದೇ ರೀತಿಯಾಗಿರುತ್ತದೆ ಎನ್ನುವ ತಪ್ಪು ಅಭಿಪ್ರಾಯ ಸಾಮಾನ್ಯವಾಗಿ ಇದೆ. ಸಾಲಗಾರನ ಹೊಣೆಯಷ್ಟೇ ಜಾಮೀನುದಾರನ ಹೊಣೆಯೂ ಇದೆ. ಆದರೆ ಇದರ ಅರ್ಥ ಸಾಲಗಾರನ ಹೊಣೆಯ ಜೊತೆಜೊತೆಯೇ ಅತನ ಹೊಣೆಗಾರಿಕೆಯೂ ಚಲಿಸುತ್ತದೆ ಎಂದರ್ಥವಲ್ಲ. ಸಾಲಗಾರ ತನ್ನ ಹೊಣೆ ನಿರ್ವಹಿಸಲು ವಿಫಲನಾದಾಗ, ಜಾಮೀನುದಾರನ ಹೊಣೆಗಾರಿಕೆ ಅವ್ಯಕ್ತವಾಗಿದ್ದು ಆಗ ಗೋಚರವಾಗುತ್ತದೆ. ನಿರಂತರ ಜಾಮೀನು (continuing guarantee) ತೆಗೆದುಕೊಂಡಾಗ ಕಾಲ ಪರಿಮಿತಿಯ ಮೂರು ವರ್ಷಗಳ ಅವಧಿ ಸಾಲಗಾರನ ಕಟಬಾಕಿ ಮತ್ತು ತದನಂತರದ ಬೇಡಿಕೆ ಸೂಚನೆ ಸಲ್ಲಿಸಿದಾಗಿನಿಂದ ಆರಂಭಗೊಳ್ಳುತ್ತದೆ. (ಮಾರ್ಗರೆಟ್ ಲಲಿತಾ ವಿರುದ್ಧ ಇಂಡೊ ಕಮರ್ಷಿಯಲ್ ಬ್ಯಾಂಕ್) ಸಾಲಗಾರ ಮತ್ತು ಜಾಮೀನುದಾರನ ವಿರುದ್ಧ ಜಂಟಿಯಾಗಿ ಡಿಕ್ರಿ (Decree) ಇದ್ದಾಗ, ಅದರ ನಿರ್ವಹಣಾ ಜಾರಿ ಮಾಡುವ ಸಂದರ್ಭದಲ್ಲಿ ಸಾಲಿಗನು ಮೊದಲು ಸಾಲಗಾರನ ವಿರುದ್ಧವೇ ಡಿಕ್ರಿ ನಿರ್ವಹಣಾ ಜಾರಿ ಮಾಡಬೇಕೆಂದೇನೂ ಇಲ್ಲ. ಸಾಲಿಗನಿಗೆ ಈ ವಿಚಾರದಲ್ಲಿ ಮುಕ್ತ ಸ್ವಾತಂತ್ರ್ಯವಿದೆ. ಆತ ಮೊದಲು ಜಾಮೀನುದಾರನ ವಿರುದ್ಧ ಹೋಗಿ, ತನ್ನ ಹಣವನ್ನು ವಸೂಲಿ ಮಾಡಿ, ಒಂದು ವೇಳೆ ಕಡಿಮೆ ಬಿದ್ದಲ್ಲಿ, ತದನಂತರ ಸಾಲಗಾರನ ವಿರುದ್ಧ ಕ್ರಮ ಕೈಗೊಳ್ಳಬಹುದಾಗಿದೆ.

**ಪುನರುಜ್ಜೀವನ ಪತ್ರಗಳು**

ಪುನರುಜ್ಜೀವನ ಪತ್ರಗಳಿಗೆ ಸಾಲಗಾರ ಮಾತ್ರ ಹಸ್ತಾಕ್ಷರ ನೀಡಿದರೆ ಸಾಲದು. ಜಾಮೀನುದಾರ ಹೊಣೆಗಾರನಾಗಬೇಕಾದರೆ ಆತನ ಹಸ್ತಾಕ್ಷರದ ಆವಶ್ಯಕತೆಯಿದೆ. ಆದರೆ ಅಂತಹ ಪುನರುಜ್ಜೀವನ ಪತ್ರಗಳಿಗೆ ತನ್ನ ಪರವಾಗಿ ಹಸ್ತಾಕ್ಷರ ನೀಡುವ ಅಧಿಕಾರವನ್ನು ಸಾಲಗಾರನಿಗೆ ನೀಡಿದ್ದು, ಅಂತಹ ಅಧಿಕಾರದ ಹಿನ್ನೆಲೆಯಲ್ಲಿ ಮಾತ್ರ ಸಾಲಗಾರ ಜಾಮೀನುದಾರನ ಪರವಾಗಿಯೂ

(23ನೇ ಪುಟಕ್ಕೆ)

# ಕ್ಷಿಪ್ರ ಪಾವತಿ ಅಧಿನಿಯಮ: ಸಣ್ಣ ಕೈಗಾರಿಕೆಯ ಆಶಾಕಿರಣ?

**ಬಿ. ಎಸ್. ಚಂದ್ರಶೇಖರ**

ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರಶಾಖೆ

ಸಣ್ಣ ಕೈಗಾರಿಕೆಗಳಿಗೆ ಬರಬೇಕಾದ ಬಾಕಿಗಳು ಸಕಾಲದಲ್ಲಿ ಪಾವತಿಯಾಗದಿರುವುದು ಒಂದು ದೊಡ್ಡ ಸಮಸ್ಯೆಯಾಗಿರುವುದರ ಹಿನ್ನೆಲೆಯಲ್ಲಿ ಕ್ಷಿಪ್ರ ಪಾವತಿ ಅಧಿನಿಯಮ ಸಕಾಲಿಕವಾದ್ದು. ಇದೊಂದು ಮಹತ್ತ್ವದ ಹೆಜ್ಜೆ.

**ರಾಷ್ಟ್ರಪತಿಯವರು** 1992ರ ಸೆಪ್ಟೆಂಬರ್ 23ರಂದು ಹೊರಡಿಸಿದ ಸುಗ್ರೀವಾಜ್ಞೆಯೊಂದು ಕೈಗಾರಿಕಾ ವಲಯಗಳಲ್ಲಿ ತೀವ್ರ ಚರ್ಚೆಗೆ ಗ್ರಾಸವಾಗಿದೆ. ಸಣ್ಣ ಕೈಗಾರಿಕೆ ಮತ್ತು ಅನುಷಂಗಿ ಘಟಕಗಳಿಗೆ (ancillary units) ಪಾವತಿ ವಿಳಂಬ ಮಾಡಿದಲ್ಲಿ ಆ ಮೊತ್ತಗಳ ಮೇಲೆ ಬಡ್ಡಿ ನೀಡಬೇಕೆಂಬುದೇ ಈ ಸುಗ್ರೀವಾಜ್ಞೆಯ ಸಾರಾಂಶ. "ಸಣ್ಣ ಮತ್ತು ಅಧೀನ ಕೈಗಾರಿಕಾ ಘಟಕಗಳಿಗೆ ವಿಳಂಬಿತ ಪಾವತಿಗಳ ಮೇಲಣ ಬಡ್ಡಿ ಸುಗ್ರೀವಾಜ್ಞೆ, 1992" ಎಂದು ಈ ಆಜ್ಞೆಯನ್ನು ನಿರೂಪಿಸಲಾಗಿದೆ. 'ಪ್ರಾಂಪ್ಟ್ ಪೇಮೆಂಟ್ ಆರ್ಡಿನೆನ್ಸ್' ಅಥವಾ 'ಕ್ಷಿಪ್ರ ಪಾವತಿ ಸುಗ್ರೀವಾಜ್ಞೆ' ಎಂದು ಇದನ್ನು ಸಂಕ್ಷಿಪ್ತವಾಗಿ ಕರೆಯಲಾಗಿದೆ.

ಆರ್ಥಿಕ ಅಭಿವೃದ್ಧಿಯಲ್ಲಿ ಸಣ್ಣ ಕೈಗಾರಿಕೆಗಳ ಪಾತ್ರದ ಮಹತ್ತ್ವ ತಿಳಿದದ್ದೇ. ಸಣ್ಣ ಕೈಗಾರಿಕೆಗಳನ್ನು ಬೆಂಬಲಿಸಲು ಅನೇಕ ಕಾರಣಗಳಿವೆ. ಕಡಿಮೆ ಬಂಡವಾಳ ಹೂಡಿಕೆ, ಅಧಿಕ ಉದ್ಯೋಗಗಳ ನಿರ್ಮಾಣ, ಸ್ಥಳೀಯ ಸಂಪನ್ಮೂಲಗಳ ಸಮರ್ಥ ಬಳಕೆ ಮುಂತಾದ ಅನುಕೂಲತೆಗಳಿಂದ ಸಣ್ಣ ಕೈಗಾರಿಕೆಗಳು ಆರ್ಥಿಕ ಅಭಿವೃದ್ಧಿಗೆ ಒಳ್ಳೆಯ ಕಾಣಿಕೆ ನೀಡುತ್ತಿವೆ.

ಈ ಕೈಗಾರಿಕಾ ಘಟಕಗಳಿಗೆ ದುಡಿಮೆ ಬಂಡವಾಳ ಪೂರೈಸುವುದಕ್ಕೆ ಬ್ಯಾಂಕುಗಳು ಆದ್ಯತೆ ನೀಡುತ್ತವೆ. ಕಚ್ಚಾ ಸರಕು, ಪ್ರಕ್ರಿಯೆಯಲ್ಲಿರುವ ಸರಕು ಮತ್ತು ಸಿದ್ಧ ಸರಕಿನ ದಾಸ್ತಾನಿಗಾಗಿ ಈ ದುಡಿಮೆ ಬಂಡವಾಳದ ಒಂದು ಅಂಶ ವೆಚ್ಚವಾಗುತ್ತದೆ. ಇನ್ನೊಂದು ಮುಖ್ಯ ಅಂಶ ಉದ್ದರಿಯ ಮೇಲೆ ನೀಡಿದ ಸರಕಿಗಾಗಿ ವೆಚ್ಚವಾಗುತ್ತದೆ. ಉದರಿಯ ಮೇರೆಗೆ ಸರಕು ಮಾರಾಟ ಸಾಮಾನ್ಯ ಸಂಗತಿಯೇ ಆದರೂ ಸಣ್ಣ ಕೈಗಾರಿಕೆಗಳ ಬಾಕಿಗಳು ಸಕಾಲದಲ್ಲಿ ಪಾವತಿಯಾಗದಿದ್ದಲ್ಲಿ ಅವುಗಳ ಬಂಡವಾಳದ ಮೇಲೆ ಪ್ರತಿಕೂಲ ಪರಿಣಾಮವಾಗುವುದು ನಿಶ್ಚಿತ ಸಣ್ಣ ಕೈಗಾರಿಕೆಗಳಿಗೆ ಬರಬೇಕಾದ ಬಾಕಿಗಳು ಸಕಾಲದಲ್ಲಿ ಪಾವತಿಯಾಗದಿರುವುದು ಒಂದು ದೊಡ್ಡ ಸಮಸ್ಯೆಯಾಗಿರುವುದರ ಹಿನ್ನೆಲೆಯಲ್ಲಿ ಮೇಲೆ ಕಾಣಿಸಿದ ಸುಗ್ರೀವಾಜ್ಞೆ ಮಹತ್ತ್ವದ ಸಂಗತಿಯಾಗುತ್ತದೆ.

ಸಣ್ಣ ಕೈಗಾರಿಕಾ ಘಟಕ ಅಥವಾ ಅನುಷಂಗಿ ಕೈಗಾರಿಕಾ ಘಟಕಗಳು ಸರಬರಾಜು ಮಾಡಿದ ಸರಕಿಗೆ ಒಪ್ಪಂದಮಾಡಿಕೊಂಡ ಗಡುವಿನ ದಿನದಂದು (due date) ಅಥವಾ ಒಪ್ಪಂದವಿಲ್ಲದೆಡೆಗಳಲ್ಲಿ—ಸರಕನ್ನು ಸ್ವೀಕರಿಸಿದ ಮೂವತ್ತು ದಿನಗಳೊಳಗೆ ಪಾವತಿ ಮಾಡಬೇಕೆಂದು ಈ ಸುಗ್ರೀವಾಜ್ಞೆ ಸ್ಪಷ್ಟಪಡಿಸುತ್ತದೆ. ಹೀಗೆ ಪಾವತಿ ಮಾಡದಿದ್ದಲ್ಲಿ ಅದನ್ನು ಮೀರಿದ ಅವಧಿಗೆ ಅಂಥ ಸಣ್ಣ ಕೈಗಾರಿಕಾ ಘಟಕದ ಸಾಲಕ್ಕೆ ಬ್ಯಾಂಕುಗಳು ವಿಧಿಸುವ ಬಡ್ಡಿ ದರಕ್ಕಿಂತ ಐದು ಶೇಕಡಾ ಅಂಶಗಳಷ್ಟು (ಪರ್ಸೆಂಟೇಜ್ ಪಾಯಿಂಟ್ಸ್) ಹೆಚ್ಚಿನ ಬಡ್ಡಿಯನ್ನು ತೆರಬೇಕೆಂದೂ ಸುಗ್ರೀವಾಜ್ಞೆ ವಿಧಿಸಿದೆ.

ಇಲ್ಲಿ ಚರ್ಚೆಗೆ ಒಳಪಡುವ ಕೆಲವು ಸೂಕ್ಷ್ಮ ಸಂಗತಿಗಳಿವೆ. ಒಪ್ಪಂದ ಮಾಡಿಕೊಂಡ ಗಡುವಿನ ದಿನದಿಂದ ಬಡ್ಡಿ ಆರಂಭವಾಗುವುದೆಂದು ಸೂಚಿತವಾಗಿರುವುದರಿಂದ ಒಪ್ಪಂದದಲ್ಲೇ ಹೆಚ್ಚಿನ ಅವಧಿಯನ್ನು ನಿಗದಿಪಡಿಸಿಕೊಳ್ಳುವ ಸಾಧ್ಯತೆಯೇ ಹೆಚ್ಚಾಗಿ, ಶೀಘ್ರಪಾವತಿ ಕನಸಿನ ಗಂಟಾಗಿಯೇ ಉಳಿಯುತ್ತದೆ. ಆದ್ದರಿಂದ ಒಪ್ಪಂದದ ವಿಷಯ ಹೇಗೇ ಇರಲಿ, ಸರಕು ಸ್ವೀಕಾರ ಮಾಡಿದ 30 ದಿನಗಳಲ್ಲಿ ಬಾಕಿಯು ಪಾವತಿಯಾಗುವಂತೆ ಖರೀದಿದಾರರನ್ನು ನಿರ್ಬಂಧಿಸುವ ಹಾಗೆ ಈ ಸುಗ್ರೀವಾಜ್ಞೆಯನ್ನು ಮಾರ್ಪಡಿಸಬೇಕೆಂದು ಸಣ್ಣ ಕೈಗಾರಿಕೆಗಳ ಸಂಘಗಳು ಸಲಹೆ ಮಾಡಿವೆ. ಈ ಸುಗ್ರೀವಾಜ್ಞೆಯ ಲಾಭ ಪಡೆಯಲು ಟ್ರಿಬ್ಯೂನಲ್‌ಗಳ ಅಥವಾ ಗ್ರಾಹಕ ವೇದಿಕೆಗಳ ನೆರವು ಲಭ್ಯವಾಗುವುದಿಲ್ಲವೆಂಬುದು ಗಮನಾರ್ಹ ಅಂಶ. ಬಾಕಿ ವಸೂಲಿಗೆ ಸಣ್ಣ ಕೈಗಾರಿಕೆಗಳು ನ್ಯಾಯಾಲಯದ ಮೊರೆಹೊಗಬೇಕಾಗುತ್ತದೆ. ಇದು ಸುಗ್ರೀವಾಜ್ಞೆಯ ಬಹು ದೊಡ್ಡ ಲೋಪ ಎಂದು ಭಾವಿಸಲಾಗಿದೆ. ತಮ್ಮ ಉತ್ಪಾದನೆಗೆ ಬೇಡಿಕೆ ಆದೇಶಗಳಿಗಾಗಿ ಸಣ್ಣ ಕೈಗಾರಿಕೆಗಳು ದೊಡ್ಡ ಕೈಗಾರಿಕೆ ಮತ್ತು ಸಾರ್ವಜನಿಕ ವಲಯದ ಘಟಕಗಳನ್ನು ಆಧರಿಸಿರುವುದು ತಿಳಿದ ವಿಷಯವೇ. ಬಾಕಿ ವಸೂಲಿಗಾಗಿ ನ್ಯಾಯಾ-

ಲಯದಲ್ಲಿ ಅಂಥ ಸಂಸ್ಥೆಗಳ ವಿರುದ್ಧ ನಿಲ್ಲುವುದು ಉದ್ಯಮಿಗಳಿಗೆ ಹಿತವಾಗುವ ಸಂಗತಿಯಲ್ಲ. ನ್ಯಾಯಾಲಯಗಳಲ್ಲಿ ದಾವೆಗಳ ಇತ್ಯರ್ಥ ತೀರ ವಿಳಂಬವಾಗುವುದರಿಂದ ಇಲ್ಲಿ ಕಕ್ಷಿಗಳಿಗೆ ಸಮಯದ ನಷ್ಟ ಅಪಾರವಾಗುತ್ತದೆ. ಉತ್ಪಾದನಾ ಚಟುವಟಿಕೆಯತ್ತ ಗಮನ ಕಡಿಮೆಯಾಗುತ್ತದೆ. ಆದ್ದರಿಂದ ಬಾಕಿ ವಸೂಲಿಗೆ ಇನ್ನೂ ಸುಲಭವಾದ ಉಪಾಯಗಳನ್ನು ಸುಗ್ರೀವಾಜ್ಞೆಯು ಸೂಚಿಸಲಿ ಎಂದು ಸಣ್ಣ ಉದ್ಯಮಿಗಳು ಬಯಸಿದ್ದಾರೆ. ಪ್ರತ್ಯೇಕ ಟ್ರಿಬ್ಯೂನಲ್, ಗ್ರಾಹಕ ವೇದಿಕೆ ಅಥವಾ ಇಂಥ ಬೇರೆ ಯಾವುದಾದರೂ ವ್ಯವಸ್ಥೆ ಹೆಚ್ಚು ಸ್ವಾಗತಾರ್ಹವೆನ್ನಿಸಬಹುದು.

ಖರೀದಿದಾರ ಸಂಸ್ಥೆಯು ಬ್ಯಾಂಕರುಗಳು ಈ ವಸೂಲಿ ಕೆಲಸ ಮಾಡಲಿ ಎಂಬ ಪ್ರಬಲವಾದ ಆಸೆಯೂ ಇದೆ. ಬ್ಯಾಂಕುಗಳು ಈ ಕೆಲಸ ನಿರ್ವಹಿಸಲು ಸಮಯ, ಸಿಬ್ಬಂದಿ ಎಲ್ಲಿದೆ ? ಇದು ಅವುಗಳ ಕೆಲಸವಾದೀತೆ ? ಸಣ್ಣ ಕೈಗಾರಿಕೆಗಳ ವಸೂಲಿ ಸಮಸ್ಯೆಯನ್ನು ಬ್ಯಾಂಕುಗಳಿಗೆ ವರ್ಗಾಯಿಸುವುದು ಸರಿಯೇ ? ಎಂಬ ಪ್ರಶ್ನೆಗಳಿಗಂತೂ ಸಮಾಧಾನಕರ ಉತ್ತರ ದೊರೆಯದು. ಆದ್ದರಿಂದ ಟ್ರಿಬ್ಯೂನಲ್ ವ್ಯವಸ್ಥೆಯೇ ಹೆಚ್ಚು ಸೂಕ್ತವೆನಿಸೀತು.

## ಕಾನೂನಿನ ಪರಿಹಾರ

ಇಂಥ ಸುಗ್ರೀವಾಜ್ಞೆಯ ಅಗತ್ಯವಿತ್ತೆ ಎಂದು ಪ್ರಶ್ನಿಸುವುದು ಸುಲಭ. ಇದರ ಹಿನ್ನೆಲೆಯನ್ನು ಮತ್ತಷ್ಟು ಅರ್ಥ ಮಾಡಿಕೊಂಡಾಗ ಈ ಪ್ರಶ್ನೆಗೆ ಉತ್ತರ ದೊರೆಯುತ್ತದೆ. ಸಣ್ಣ ಕೈಗಾರಿಕೆಗಳಿಗೆ ಪಾವತಿಯಾಗಬೇಕಾದ ಬಾಕಿಗಳು ಸಕಾಲದಲ್ಲಿ ಪಾವತಿಯಾಗುತ್ತಿಲ್ಲವೆಂಬ ದೂರು ಬಹುಕಾಲದಿಂದಲೂ ಇದ್ದದ್ದೇ. ಈ ಸಮಸ್ಯೆಗೆ ಪರಿಹಾರ ಹುಡುಕಲಾಗುತ್ತಿದ್ದು. ಕಾನೂನಿಕ ಪರಿಹಾರವಾಗಿ ಈ ಸುಗ್ರೀವಾಜ್ಞೆ ಹೊರಬಿದ್ದಿದೆ. ವಿಳಂಬಿತ ಪಾವತಿಗಳಿಂದ ಸಣ್ಣ ಕೈಗಾರಿಕೆಯ ಆರ್ಥಿಕ ಭದ್ರತೆಗೆ ಹಾನಿಯಾಗುತ್ತಿರುವುದು ನಿಜ. ಆದರೆ ದೊಡ್ಡ ಕೈಗಾರಿಕೆಗಳನ್ನು ಅವು ಬಹುವಾಗಿ ಅವಲಂಬಿಸಿರುವುದರಿಂದ ವಿಳಂಬಿತ ಪಾವತಿಯ ಬಗ್ಗೆ ಏನೂ ಮಾಡಲಾಗದ ಅಸಹಾಯಕ ಪರಿಸ್ಥಿತಿ ಅವುಗಳದು. ಇದರ ಪರಿಣಾಮ ಹತಾಶೆ. ಸಣ್ಣ ಕೈಗಾರಿಕಾ ಘಟಕಗಳು ಬ್ಯಾಂಕುಗಳಲ್ಲಿ ಉದರಿ ಪಡೆದಿದ್ದು ಅವುಗಳ ಉದರಿ ಖಾತೆಗಳು ಕ್ರಮ ತಪ್ಪುತ್ತವೆ. ಬಾಕಿಯೊಡನೆ ಬಡ್ಡಿಯೂ ಏರುತ್ತದೆ. ಇಲ್ಲಿ ಸಣ್ಣ ಕೈಗಾರಿಕೆಯದೊಂದೇ ಸಮಸ್ಯೆ ಅಲ್ಲ. ಬ್ಯಾಂಕುಗಳಿಗೆ ಅವುಗಳಿಂದ ಬರಬೇಕಾದ ಬಾಕಿಗಳು ಹೆಚ್ಚಿ ಬ್ಯಾಂಕುಗಳ ದ್ರವತ್ವ ಕುಂಠಿತವಾಗುತ್ತದೆ. ಬ್ಯಾಂಕಿಂಗ್ ವ್ಯವಸ್ಥೆ ಸುಗಮವಾಗಿ ಕೆಲಸ ಮಾಡಲು ಇಂಥ ಪರಿಸ್ಥಿತಿ ಸಹಕಾರಿಯಲ್ಲ. ಈ ಎಲ್ಲ ಸಂಗತಿಗಳನ್ನೂ ಗಮನಿಸಿದಾಗ ಸಕಾಲಿಕ ಬಾಕಿ ಪಾವತಿಗೆ ಅನುವಾಗುವಂತೆ ಕಾನೂನಿಕ ನಿರ್ಬಂಧ ವಿಧಿಸುವುದು ಸರಿ ಎನ್ನಿಸುತ್ತದೆ.

ಪಾವತಿ ವಿಳಂಬ ಮಾಡುವ ಬಾಕಿದಾರರೆಂದರೆ ಸಾಮಾನ್ಯವಾಗಿ ಸಾರ್ವಜನಿಕವಲಯದ ಸಂಸ್ಥೆಗಳು. ಸಕಾಲದಲ್ಲಿ ಪಾವತಿ ಮಾಡಲು ಅವುಗಳಿಗೆ ತಮ್ಮದೇ ಆದ ಸಮಸ್ಯೆಗಳಿವೆ. ತಮ್ಮದು ವಾಣಿಜ್ಯ ದೃಷ್ಟಿಯ ವ್ಯವಹಾರವಲ್ಲ. ಸೇವಾದೃಷ್ಟಿ ಮುಖ್ಯವಾದ್ದರಿಂದ ತಮಗೆ ಬರಬೇಕಾದ ಹಣ ಸಕಾಲದಲ್ಲಿ ಬಾರದಿರುವುದು ಸಾಮಾನ್ಯ; ಆದ್ದರಿಂದ ತಾವು ಪಾವತಿ ಮಾಡುವುದು ನಿಧಾನವಾಗುತ್ತದೆ ಎಂದು ಅವು ವಾದಿಸುತ್ತವೆ. ಜತೆಗೆ ಆಯವ್ಯಯದಲ್ಲಿ ಹಣ ಮಂಜೂರಾಗುವವರೆಗೂ ಪಾವತಿ ಮಾಡಲು ಸಾಧ್ಯವಿಲ್ಲವೆಂದೂ ಅವು ತಮ್ಮ ಅಸಹಾಯಕತೆ ವ್ಯಕ್ತಪಡಿಸುತ್ತವೆ. ಇದೇನೇ ಆದರೂ, ಸಾರ್ವಜನಿಕ ವಲಯದ ಸಂಸ್ಥೆಗಳ ಸರಕು ನಿರ್ವಹಣೆ ಅಥವಾ ಹಣಕಾಸು ವ್ಯವಸ್ಥಾಪನೆಗಳಲ್ಲಿ ಲೋಪದೋಷಗಳು ವಿಪುಲವಾಗಿವೆಯೆಂಬ ಭಾವನೆಯಲ್ಲಿ ಸತ್ಯಾಂಶವಿಲ್ಲದಿಲ್ಲ. ಪಾವತಿ ಮಾಡಲು ಸಾಧ್ಯವಿಲ್ಲದ ಸರಕುಗಳನ್ನು ಖರೀದಿಸುವುದಾದರೂ ಏಕೆ ? ಎಂಬ ಪ್ರಶ್ನೆಗೆ ಸಮರ್ಪಕ ಉತ್ತರ ದೊರೆಯುವುದಿಲ್ಲ. ಆಯವ್ಯಯದಲ್ಲಿ ಹಣ ಮಂಜೂರಾಗುವುದಕ್ಕೂ ಮೊದಲೇ ಬೃಹತ್ ಸಂಸ್ಥೆಗಳಿಂದ ಖರೀದಿ ಆದೇಶಗಳನ್ನು ಪಡೆಯಲು ವಿವಿಧ ತಂತ್ರ ಹೂಡುವ ಸಣ್ಣ ಕೈಗಾರಿಕೆಗಳೂ ಇವೆ. ವ್ಯವಸ್ಥೆ ಏರುಪೇರಾಗಲು ಇಂಥ ಆಡಳಿತ ಅಸಮರ್ಪಕತೆ ಮತ್ತು ಆತುರದ ವಹಿವಾಟುಗಳು ಬಹುಮಟ್ಟಿಗೆ ಕಾರಣವೆನ್ನಬಹುದು. ಒಟ್ಟಿನಲ್ಲಿ ಸಕಾಲಿಕ ಪಾವತಿ ಮಾಡಲು ಸಾಧ್ಯವಾಗದೆಂಬ ತಮ್ಮ ವಾದವನ್ನು ದೊಡ್ಡ ಕೈಗಾರಿಕೆಗಳು ಮತ್ತು ಸಾರ್ವಜನಿಕ ವಲಯ ಸಂಸ್ಥೆಗಳು ಮುಂದಿಟ್ಟಿವೆ. ಜತೆಗೆ ತಮಗೆ ಬರಬೇಕಾದ ಬಾಕಿಗಳಿಗೂ ಈ ಸುಗ್ರೀವಾಜ್ಞೆ ಅನ್ವಯವಾಗಲಿ ಎಂದೂ ಅವು ಬೇಡಿಕೆ ಮಂಡಿಸಿವೆ. ಈ ಆಜ್ಞೆಯ ಮುಷ್ಟಿಯಿಂದ ತಪ್ಪಿಸಿಕೊಳ್ಳಲು ಅವು ಪಾವತಿಗೆ ಸುದೀರ್ಘ ಅವಧಿ ದೊರಕಿಸುವ ಒಪ್ಪಂದಗಳನ್ನು ಸಣ್ಣ ಘಟಕಗಳ ಮೇಲೆ ಹೇರಬಹುದು. ಈಗಾಗಲೇ ಹಾಗೆ ಮಾಡಲಾಗುತ್ತಿದೆ ಎಂದು ಅನೇಕ ಸಣ್ಣ ಘಟಕಗಳು ದೂರುತ್ತಿವೆ. ಕೋರ್ಟಿನ ಮೆಟ್ಟಿಲು ಹತ್ತುವ ಘಟಕಕ್ಕಂತೂ ಮುಂದೆಂದೂ ಖರೀದಿ ಆದೇಶ ದೊರೆಯಲಾರದೆಂಬ ಬೆದರಿಕೆ ತಂತ್ರವೂ ಕೆಲಸ ಮಾಡಲು ಸಾಧ್ಯ.

## ಮಹತ್ವದ ಹೆಜ್ಜೆ

ಕೇವಲ ಕಾನೂನು ರಚಿಸುವುದರಿಂದಲೇ ಎಲ್ಲ ಸಮಸ್ಯೆಗಳೂ ಪರಿಹಾರವಾಗುವುದಿಲ್ಲ. ಕೈಗಾರಿಕಾ ಘಟಕಗಳ ಪರಸ್ಪರ ವ್ಯವಹಾರದಲ್ಲಿ ಕಾನೂನೊಂದು ಮೂಗು ತೂರಿಸಬೇಕೇ ? ಎಂದು ಪ್ರಶ್ನಿಸುವವರೂ ಇದ್ದಾರೆ. ವ್ಯಾವಹಾರಿಕ ಬಾಂಧವ್ಯ ಸ್ನೇಹಪೂರ್ಣವಾಗಿರಬೇಕೆಂದು ಬಯಸುವುದು ತಪ್ಪಲ್ಲವಾದರೂ ಪಾವತಿ ವಿಳಂಬದಿಂದ ಸಣ್ಣ ಕೈಗಾರಿಕೆಗಳು ಅನುಭವಿಸುತ್ತಿರುವ ಸಂಕಷ್ಟಗಳನ್ನು ಮರೆಯಬಾರದು. ಇಲ್ಲಿ ಮಾನವರ ಇಚ್ಛೆಗಿಂತ ಕಾನೂನಿನ ಇಚ್ಛೆ ಕೆಲಸ ಮಾಡುವುದು ವಿಹಿತವೆಂದು ಕಾನೂನು ತಜ್ಞರ ಅಭಿಮತ.

ಇಂಥ ಒಂದು ಸನ್ನಿವೇಶದಲ್ಲಿ ಯಾವುದೇ ಕಾನೂನು ಇಲ್ಲದಿರುವುದಕ್ಕಿಂತಲೂ ಒಂದು ಕಾನೂನು–ಅದೆಷ್ಟೇ ಅಸಮರ್ಪಕ ಎನ್ನಿಸಲಿ–ಇರಬೇಕೆಂದು ಕಾನೂನು ತಜ್ಞರು ಇದನ್ನು ತುಂಬು ಮನಸ್ಸಿನಿಂದ ಸ್ವಾಗತಿಸಿದರೆ, ಸಣ್ಣ ಉದ್ಯಮಿಗಳು ಸಂಶಯದ ದೃಷ್ಟಿಯಿಂದ ಅರೆಮನಸ್ಸಿನಿಂದಲೇ ಇದನ್ನು ಬರಮಾಡಿಕೊಂಡಿದ್ದಾರೆ.

1992ರ ಸೆಪ್ಟೆಂಬರ್ 23ರಿಂದ ಜಾರಿಗೆ ಬಂದಿರುವ ಈ ಸುಗ್ರೀವಾಜ್ಞೆ ಮುಂದಿನ ಪಾರ್ಲಿಮೆಂಟ್ ಅಧಿವೇಶನಗಳಲ್ಲಿ ಅಧಿನಿಯಮವಾಗಿ ಪರಿವರ್ತನೆಗೊಂಡಾಗ ಇದರ ರೂಪುರೇಷೆಗಳು ಮತ್ತಷ್ಟು ಸ್ಪಷ್ಟವಾಗಿ, ಸಣ್ಣ ಉದ್ಯಮಿಗಳಿಗೆ ವ್ಯಾವಹಾರಿಕವಾಗಿ ಹೆಚ್ಚು ಅನುಕೂಲವಾಗುವುದೆಂಬ ಆಸೆಯೂ ಇದೆ. ಆರು ತಿಂಗಳೊಳಗೆ ಅಧಿನಿಯಮವಾಗಿ ಮಾರ್ಪಡಬೇಕಾಗಿರುವ ಈ ಸುಗ್ರೀವಾಜ್ಞೆಯು ಅಯೋಧ್ಯೆಯ ಗಲಭೆ ಮುಂತಾದ ರಾಜಕೀಯ ಕಾರಣಗಳಿಂದ ಸಂಸತ್ತಿನಲ್ಲಿ ಈವರೆಗೆ ಚರ್ಚೆಗೆ ಬಂದಿಲ್ಲ.

ದೊಡ್ಡ ಉದ್ಯಮಿಗಳೂ, ಸಾರ್ವಜನಿಕ ವಲಯ ಸಂಸ್ಥೆಗಳೂ ಈ ಸುಗ್ರೀವಾಜ್ಞೆಯನ್ನು ಸ್ವಾಗತಿಸಿಲ್ಲ ಎಂಬುದಂತೂ ಸ್ಪಷ್ಟ. ನವೆಂಬರ್ ತಿಂಗಳ ಕೊನೆಯಲ್ಲಿ ನಡೆಸಿದ ಒಂದು ಕಿರು ಸರ್ವೇಕ್ಷಣದಲ್ಲಿ ಇಂಥ ಬಹುತೇಕ ಸಂಸ್ಥೆಗಳ ಮುಖ್ಯರಿಗೆ ಈ ಸುಗ್ರೀವಾಜ್ಞೆ ಜಾರಿಗೆ ಬಂದಿರುವ ವಿಷಯವೇ ತಿಳಿದಿಲ್ಲವೆಂಬ 'ಸತ್ಯ' ಬೆಳಕಿಗೆ ಬಂತು. ಹೆಚ್ಚುವರಿ ಅವಧಿಗೆ ಬಡ್ಡಿ ನೀಡುವುದೇನೋ ಸರಿಯೆ ; ಆ ಬಡ್ಡಿಯನ್ನು ಆದಾಯ ತೆರಿಗೆಯ ದೃಷ್ಟಿಯಲ್ಲಿ ವೆಚ್ಚವೆಂದು ಪರಿಗಣಿಸಬಾರದೆನ್ನುವ ಸುಗ್ರೀವಾಜ್ಞೆಯ ಒಂದು ಅಂಶವನ್ನು ಅನೇಕರು ಒಪ್ಪಿಲ್ಲ. ಸಣ್ಣ ಕೈಗಾರಿಕೆಗಳ ಸಂಸ್ಥೆಗಳೂ ಇದನ್ನು ಮಾರ್ಪಡಿಸುವಂತೆ ಮನವಿ ಮಾಡಿವೆ.

ಅಧಿಕ ಬಡ್ಡಿ, ಜೊತೆಗೆ ತೆರಿಗೆಯ ಹೊರೆ—ಈ ಅಸ್ತ್ರಗಳಿಂದ ವಿಳಂಬಿತ ಪಾವತಿಯನ್ನು ತಡೆಯುವ ಉದ್ದೇಶ ಸರ್ಕಾರದ್ದು. ಸಕಾಲಿಕ ಪಾವತಿಯನ್ನು ವ್ಯಾವಹಾರಿಕವಾಗಿ ಅನಿವಾರ್ಯವಾಗಿಸುವ ದೃಷ್ಟಿ ಇಲ್ಲಿದೆಯೆಂದು ಕೆಲವರ ವಾದ. ಈ ಸುಗ್ರೀವಾಜ್ಞೆಯ ಲಾಭ ಸೆಪ್ಟೆಂಬರ್ 23ರಿಂದ ಈಚಿನ ವಹಿವಾಟುಗಳಿಗೆ ಮಾತ್ರವೇ ಅನ್ವಯವಾಗುತ್ತದೆ. ಸುಗ್ರೀವಾಜ್ಞೆಯು ಅಧಿನಿಯಮದ ರೂಪ ತಳೆಯುವುದಕ್ಕೆ ಕೆಲಕಾಲ ಬೇಕು. ಆಸಕ್ತ ಸಾರ್ವಜನಿಕರಲ್ಲಿ ಈ ಕುರಿತು ಚಿಂತನ ಮಂಥನಗಳು ನಡೆದು ಸಂಸತ್ತಿನಲ್ಲಿ ಚರ್ಚಿತವಾಗಿ ಯಥೋಚಿತವಾಗಿ ಮಾರ್ಪಾಡು ಹೊಂದಿ ಅಧಿನಿಯಮವೊಂದು ಸಿದ್ಧವಾಗುತ್ತದೆ. ಹೆಚ್ಚಿನ ವಿಷಯಗಳನ್ನೂ, ಸಮಸ್ಯೆಯ ಹಲವು ಮಗ್ಗುಲಂಗಳನ್ನೂ ಅದು ಗಣನೆಗೆ ತಂದುಕೊಂಡಿರುವುದೆಂದು ನಿರೀಕ್ಷಿಸಬಹುದು.

ಅಲ್ಲಿಯವರೆಗೆ ಸರಳವೂ, ಸಂಕ್ಷಿಪ್ತವೂ, ಸ್ಪಷ್ಟವೂ ಆಗಿರುವ ಈ ಸುಗ್ರೀವಾಜ್ಞೆ ಇದ್ದೇ ಇದೆ. ವಿಳಂಬಿತ ಪಾವತಿಯ ಸಮಸ್ಯೆಗೆ ಇದೊಂದು ಕಾನೂನಿಕ ಪರಿಹಾರ ಮಾತ್ರವಾದರೂ ಸಮಸ್ಯೆಯ ಮೂಲವನ್ನು ಬೆದಕಿ ನೋಡಿ ಇತರ ಪರಿಹಾರಗಳನ್ನು ಕುರಿತು ಚಿಂತಿಸಲು ಈ ಸುಗ್ರೀವಾಜ್ಞೆ ಪ್ರಚೋದನೆ ನೀಡಬಹುದು. ಆದ್ದರಿಂದ ಇದರ ಇತಿಮಿತಿಗಳೇನೇ ಇರಲಿ, ಸಣ್ಣ ಕೈಗಾರಿಕೆಯ ಜ್ವಲಂತ ಸಮಸ್ಯೆಯೊಂದನ್ನು ಪರಿಹರಿಸುವ ದಿಶೆಯಲ್ಲಿ ಇದೊಂದು ಮಹತ್ವದ ಹೆಜ್ಜೆ ಎಂಬುದು ನಿರ್ವಿವಾದ. ●

## ಜಾಮೀನುದಾರನ ಹೊಣೆಗಾರಿಕೆಯ ವ್ಯಾಪ್ತಿ

(20ನೇ ಪುಟದಿಂದ)

ಹಸ್ತಾಕ್ಷರ ನೀಡಬಹುದಾಗಿದೆ. ಮತ್ತು, ಅಂತಹ ಸಂದರ್ಭದಲ್ಲಿ ಅದು ಜಾಮೀನುದಾರನ ಮೇಲೆ ಬಂಧನಕಾರಿಯಾಗಿರುತ್ತದೆ. ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರಗಳು ನೀಡಿದ ಜಾಮೀನುಗಳನ್ನು ಪರಿಶೀಲಿಸುವಾಗ ಮುಖ್ಯವಾಗಿ ಒಂದು ಅಂಶವನ್ನು ಗಮನಿಸಬೇಕು. ಜಾಮೀನನ್ನು ಕೇಂದ್ರ ಸರ್ಕಾರವಾಗಿದ್ದಲ್ಲಿ ರಾಷ್ಟ್ರಪತಿಗಳ ಪರವಾಗಿ, ರಾಜ್ಯ ಸರ್ಕಾರಗಳಾಗಿದ್ದಲ್ಲಿ ರಾಜ್ಯಪಾಲರ ಪರವಾಗಿ ಎನ್ನುವುದು ನಮೂದಿತವಾಗಿರಬೇಕು. ಜೊತೆಗೆ ನಿರ್ವಹಣಾ ಸಂದರ್ಭದಲ್ಲಿ, ನಿಯಮಗಳ ಪ್ರಕಾರ ಅಧಿಕಾರವಿರುವವರು ಮಾತ್ರ, ರಾಷ್ಟ್ರಪತಿ ಅಥವಾ ರಾಜ್ಯಪಾಲರ ಪರವಾಗಿ, ಹಸ್ತಾಕ್ಷರ ನೀಡಿ ನಿರ್ವಹಣೆ ಮಾಡತಕ್ಕದ್ದು. ಇದು ಭಾರತದ ಸಂವಿಧಾನದ ಪ್ರಕಾರ ಕಡ್ಡಾಯವಾಗಿ ಪಾಲಿಸಲೇಬೇಕಾದ ನಿಯಮ. ★

## ಬ್ಯಾಂಕಿಂಗ್ ಅ(ನ)ರ್ಥ ಕೋಶ

**ಗುಮಾಸ್ತ :** ಅಧಿಕಾರಿಗೆ ಹೆದರದ, ಅಧಿಕಾರವಿಲ್ಲದ 'ಖಾರ' ಕೂನ.

**ಕ್ಯಾಶಿಯರ್ :** ಬ್ಯಾಂಕ್ ಶಾಖೆಯೊಳಗಿನ 'ಲಕ್ಷ್ಮೀ'ಪತಿ ಅಥವಾ 'ನಡುಬೀದಿ' ನಾರಾಯಣನ ಪತ್ನಿ 'ಲಕ್ಷ್ಮಿ'.

**ಕ್ಯಾಶ್ ಆಫೀಸರ್ :** ಧರೆಯೊಳಗೆ ಅಲ್ಪಕಾಲದ ಕುಬೇರ.

**ಉಳಿತಾಯ ಖಾತೆ :** ಸಂಬಳ ಮಗ್ಗೆರೆ ಜಮಾ ಮಾಡಲು ಉಳಿತಾಯವಿರದ ಖಾತೆ.

**ಚಾಲ್ತಿ ಖಾತೆ :** ಮಸಿಯ ಬಣ್ಣವನ್ನು ಬದಲಾಯಿಸಿ ಶಿಲ್ಕು ಬರೆಯುವ ಸೌಲಭ್ಯವಿರುವ ಖಾತೆ.

**ವ್ಯವಹಾರದ ಸಮಯ :** ಕಛೇರಿಯಲ್ಲಿ ಸಿಬ್ಬಂದಿಯವರು ಆಸೀನರಾಗಿರುವ ಸಮಯ.

**ಸಂಬಳದ ದಿನ :** ಸಾಲ ಕೊಟ್ಟವನಿಗೆ ಖಾತ್ರಿಯನ್ನು ನೀಡಿ ಸಾಲಗಳನ್ನು ನವೀಕರಿಸುವ ದಿನ.

**ಪಾಸ್ ಪುಸ್ತಕ :** ಶಾಸನಗಳ ಅಧ್ಯಯನಕ್ಕೆ ಅನುಕೂಲವಾಗುವಂತಹ ಒಂದು ಕಿರುಹೊತ್ತಗೆ.

**'ಪ್ರಿಯಂವದಾ'**
ಭಾರತೀಯ ಸ್ಟೇಟ್ ಬ್ಯಾಂಕ್

ಪುಸ್ತಕ ವಿಮರ್ಶೆ

# ಭಾರತದಲ್ಲಿ ಬ್ಯಾಂಕಿಂಗ್ - ಕೆಲವು ಚಿಂತನೆಗಳು

## ಬಿ. ಎಸ್. ಚಂದ್ರಶೇಖರ್

ಪ್ರಕಾಶಕರು : ಬ್ಯಾಂಕಿಂಗ್ ಪ್ರತಿಷ್ಠಾನ, ಕನ್ನಡ ಸಂಘ, ಭಾರತೀಯ ಸ್ಟೇಟ್ ಬ್ಯಾಂಕ್, ಬೆಂಗಳೂರು ನಗರ ಶಾಖೆ
ಪುಟ : 178 ; ಬೆಲೆ : ಸಾಧಾರಣ ಪ್ರತಿ ರೂ. 30, ಉತ್ತಮ ಪ್ರತಿ ರೂ. 40

ಕನ್ನಡದಲ್ಲಿ ಬ್ಯಾಂಕಿಂಗ್ ಸಾಹಿತ್ಯದ ಕುರಿತಾಗಿ ಮೂಡಿಬಂದ ಉತ್ತಮ ಕೃತಿ ಇದು. ಕನ್ನಡ ಪಾರಿಭಾಷಿಕ ಪದಗಳನ್ನು ಉಪಯೋಗಿಸಿಕೊಂಡು, ಬ್ಯಾಂಕಿಂಗ್ ಚಿಂತನೆಯನ್ನು ಸಮರ್ಥವಾಗಿ ಪ್ರತಿಬಿಂಬಿಸಿರುವಂತಹ ಹದಿನೈದು ಲೇಖನಗಳ ಸಮುಚ್ಚಯವಿದು. ಈಗಾಗಲೇ 'ಬ್ಯಾಂಕಿಂಗ್ ಪ್ರಪಂಚ' ಪತ್ರಿಕೆಯಲ್ಲಿ ಪ್ರಕಟವಾಗಿರುವ ಇಲ್ಲಿಯ ಬಹುತೇಕ ಲೇಖನಗಳು ಬ್ಯಾಂಕಿಂಗ್ ಕ್ಷೇತ್ರದ ವಿಚಾರ ವೈವಿಧ್ಯವನ್ನು ತುಂಬ ಚೆನ್ನಾಗಿ ಪ್ರತಿಪಾದಿಸಿವೆ. ವೃತ್ತಿಪರ ಬ್ಯಾಂಕರರಾದ ಲೇಖಕರು ತಮ್ಮ ಅನುಭವದ ಮೂಸೆಯಲ್ಲಿ ಪ್ರೌಢ ಬ್ಯಾಂಕಿಂಗ್ ಚಿಂತನೆಗಳನ್ನು ಇಲ್ಲಿ ಸರಳ ಭಾಷೆಯಲ್ಲಿ ಸುಲಲಿತವಾಗಿ ವಿಶ್ಲೇಷಿಸಿದ್ದಾರೆ.

ಗ್ರಾಹಕಸೇವೆ, ಸಣ್ಣ ಕೈಗಾರಿಕೆ, ಅಸ್ವಸ್ಥ ಘಟಕಗಳ ಪುನರುಜ್ಜೀವನ, ಸಾಲ ವಸೂಲಿ, ಕಂಪ್ಯೂಟರಿನ ಉಪಯೋಗ, ಅಂತರರಾಷ್ಟ್ರೀಯ ಹಣನಿಧಿ ಮತ್ತು ಪ್ರತಿವ್ಯಾಪಾರ, ಸ್ವಿಫ್ಟ್ ಮತ್ತು ಏಕ ಯುರೋಪಿಯನ್ ಮಾರುಕಟ್ಟೆ, ದುಡಿಮೆ ಬಂಡವಾಳ, ಆಸ್ತಿಹೊಣೆ ತಃಖ್ತೆ, ಮೇಳ-ಮನ್ನಾ-ಮೊಹ್ರಾಗಳ ಸುಳಿ ಮುಂತಾದ ವಿಚಾರಗಳ ವರೆಗೂ ಇಲ್ಲಿಯ ಚಿಂತನೆ ಸಾಗಿದೆ. ಕೊನೆಗೆ ನೀಡಿರುವ ಪಾರಿಭಾಷಿಕ ಪದಾವಳಿ ಮತ್ತು ವಿಷಯಸೂಚಿ, ಅನುಬಂಧಗಳು ಪುಸ್ತಕದ ಮೌಲ್ಯವನ್ನು ಹೆಚ್ಚಿಸಿವೆ.

ಲೇಖಕರೇ ಹೇಳಿಕೊಂಡಂತೆ "ಅಲಭ್ಯ ಅಂಕಿ ಅಂಶಗಳ ಬೆನ್ನಟ್ಟಿ ಹೋಗದೆ, ವೃತ್ತಿಪರರು ಮಾತ್ರವೇ ನಿರೀಕ್ಷಿಸಬಹುದಾದ ಸೂಕ್ಷ್ಮವೂ ಗೊಂದಲಮಯವೂ ಆದ ಅನಗತ್ಯ ವಿವರಗಳಲ್ಲಿ ದಾರಿ ತಪ್ಪದೆ, ವಿಷಯಗ್ರಹಣಕ್ಕೆ ಅಗತ್ಯವಾಗುವಂಥ ಸಂಗತಿಗಳನ್ನು ಮಾತ್ರ ದಾಖಲಿಸಿದ ಪ್ರಯತ್ನ" ಇಲ್ಲಿದೆ. ಪಾರಿಭಾಷಿಕ ಪದ ಪ್ರಯೋಗದೊಂದಿಗೇ ಆವರಣದಲ್ಲಿ ಇಂಗ್ಲಿಷ್ ಶಬ್ದಗಳನ್ನು ನೀಡಿರುವುದರಿಂದ ಹೊಸ ಓದುಗರಿಗೆ ತೊಡಕಾಗುವುದಿಲ್ಲ. ಬ್ಯಾಂಕ್ ಉದ್ಯೋಗಿಗಳಿಗೆ, ವ್ಯವಸ್ಥಾಪಕ ವರ್ಗಕ್ಕೆ, ವಾಣಿಜ್ಯಶಾಸ್ತ್ರ ವಿದ್ಯಾರ್ಥಿಗಳಿಗೆ ಹಾಗೂ ಅಧ್ಯಾಪಕರಿಗೆ ಈ ಪುಸ್ತಕ ಉತ್ತಮ ಮಾರ್ಗದರ್ಶನ ನೀಡಬಲ್ಲದು. ಬ್ಯಾಂಕಿಂಗ್ ವ್ಯವಹಾರ ವ್ಯಾಪಕವಾಗಿರುವ ಹಿನ್ನೆಲೆಯಲ್ಲಿ ಈ ಕೃತಿ ಸಾರ್ವಜನಿಕರಿಗೂ ಉಪಯುಕ್ತವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ.

ಕನ್ನಡದಲ್ಲಿ ಬ್ಯಾಂಕಿಂಗ್ ಕುರಿತಾದ ಕೃತಿಗಳನ್ನು ಪ್ರಕಟಿಸುವುದು ನಿಜಕ್ಕೂ ಒಂದು ಸಾಹಸವೇ. ಅನೇಕ ಇತಿಮಿತಿಗಳ ನಡುವೆಯೂ ಇಂತಹ ಕೃತಿಪ್ರಕಾಶನದಲ್ಲಿ ತೊಡಗಿರುವ ಪ್ರತಿಷ್ಠಾನದ ಚಟುವಟಿಕೆಗಳನ್ನು ಪ್ರೋತ್ಸಾಹಿಸಬೇಕಾಗಿದೆ. ಕರ್ನಾಟಕದ ಎಲ್ಲ ಬ್ಯಾಂಕ್ ಶಾಖೆಗಳೂ ಈ ಕೃತಿಯನ್ನು ಕೊಂಡುಕೊಳ್ಳಬೇಕು. ಈ ಕೃತಿಕರ್ತರಿಂದ ಇನ್ನಷ್ಟು ಮೌಲಿಕ ಬ್ಯಾಂಕಿಂಗ್ ಸಾಹಿತ್ಯ ಮೂಡಿಬರಲಿ. ಪ್ರತಿಷ್ಠಾನದ ಪ್ರತಿಷ್ಠೆ ಏರಲಿ. ಕನ್ನಡದಲ್ಲಿ ಬ್ಯಾಂಕಿಂಗ್ ಚಿಂತನೆ ಇನ್ನಷ್ಟು ಬಲಗೊಳ್ಳಲಿ.

—ಕಬ್ಬಿನಾಲೆ ವಸಂತ ಭಾರದ್ವಾಜ್
ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಹಾಸನ

---

## ಬ್ಯಾಂಕಿಂಗ್ ಅ(ನ)ರ್ಥ ಕೋಶ

**ಬಡ್ಡಿ ದರ :** ತ್ವರಿತವಾಗಿ ಬಣ್ಣ ಬದಲಾಯಿಸಿಕೊಳ್ಳುವ 'ಮಾರುಕಟ್ಟೆ ಗೋಸುಂಬೆ.

**ರಾಷ್ಟ್ರೀಕೃತ ಬ್ಯಾಂಕು :** 'ಭಿನ್ನ'ವಾಗಿದ್ದು ನಂತರದಲ್ಲಿ ವಿಲೀನದೊಂದಿಗೆ 'ಏಕತೆ' ಯನ್ನು ಸಾಧಿಸಿ ತೋರಿಸುವ ಬ್ಯಾಂಕ್.

'ಪ್ರಿಯಂವದಾ'
ಭಾರತೀಯ ಸ್ಟೇಟ್ ಬ್ಯಾಂಕ್

R. N. 36702/83




# STATE BANK OF INDIA
## STAFF CO-OPERATIVE CREDIT SOCIETY LIMITED

(Registered No. 7062)

**State Bank's Building, Post Bag No. 5245**
**ST. MARKS ROAD BANGALORE 560 001**

***Deposits are Accepted only from SBI staff / P***

76. ಚಂದ್ರಶೇಖರ
ನಂ.1, ಮುಕ್ತೇಶ್ವರಮ್ಮನ ಗುಡಿ ಬೀದಿ
ಜೆ.ಸಿ.ನಗರ
ಬೆಂಗಳೂರು
560 006

**SPECIAL TERM DEPOSIT**

(Acceptable in Multiples of Rs. 100/- Minimum

RECEIVE AFTER

| Invest Rupees | 12 months | 24 months | 36 months | 48 m |
|---|---|---|---|---|
| Rs. 100 | 113-65 | 131-70 | 160-10 | 18 |

**RECURRING DEPOSIT**

(Minimum Rs. 50/- Monthly Instalment by Cash/Sal

RECEIVE AFTER

| Invest Rupees | 12 months | 24 months | 36 months | 48 mo |
|---|---|---|---|---|
| Rs. 100 | 1288-00 | 2779-00 | 4625-60 | 6719 |

**RATES OF INTEREST FOR FIXED DEPOSIT**

(Minimum Rs. 500/- Interest Payable at Monthly, Quart

| PERIOD | Rate of Interest P |
|---|---|
| 1 year and above but less than 2 years | 1 |
| 2 years and above but less than 3 years | 14 |
| 3 years and above but less than 5 years | 16 |
| 5 years and above | 17% |

### INVEST

***Your Surplus funds and savings in our Re-investment an***
***Fixed Deposit Schemes and earn more interest on your investm***

PRINTED BY G. H. KRISHNAMURTHY, MYSORE PRINTING AND PUBLISHING HOUSE, CLOCK TOWER SQUARE, MYSORE-1